# ಅಚಲ

ತಿಂಗಳ ಪತ್ರಿಕೆ

**ಮಾರ್ಚ್ 2002**

- ವಿಧವೆಯರ ಅಳಲು
- ಮಂಗಳವಾದ್ಯ ಮೊಳಗಿದ ಮೇಲೆ
- ಸ್ತ್ರೀವಾದಿ ಅಧ್ಯಯನಕ್ಕೊಂದು ಹೊಸ ಸೇರ್ಪಡೆ
- ಕ್ರಾಂತಿಕಾರಿ ನಾಯಕಿ ಕ್ಲಾರಾಜೆಟ್‌ಕಿನ್
- ನಾಪತ್ತೆಯಾದ ಸ್ತ್ರೀಯರ ರಹಸ್ಯ




ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 17 ಸಂಚಿಕೆ - 3



ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು.

ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

*Printed at*
Lipi Mudrana
Bangalore - 560 004


ಆತ್ಮೀಯರೇ,

ಕಳೆದ 17 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ.ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ. ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

ಅಚಲದ ಚಂದಾ ವಿವರಗಳು ಹೀಗಿವೆ :

ವಾರ್ಷಿಕ ಚಂದಾ : ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಅಜೀವ ಚಂದಾ : ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

ಗಮನಿಸಿ

ಅಚಲ ವಿಳಾಸ ಬದಲಾಗಿದೆ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

ಸಂಪಾದಕೀಯ

# ಕಳೆದು ಹೋಗಿದೆ ಶಾಂತಿ ಪಕ್ಷಿ

ಗುಜರಾತಿನ ಗೋಧ್ರಾದಲ್ಲಿ ಫೆಬ್ರವರಿ 27ರಂದು ನಡೆದ ಹತ್ಯಾಕಾಂಡ ಸ್ವತಂತ್ರಭಾರತದಲ್ಲಿ ನಡೆದ ಪೈಶಾಚಿಕ ಘಟನೆಗಳಲ್ಲಿಯೇ ಕುಖ್ಯಾತವಾದದ್ದು. ಅದೊಂದು ಬರ್ಬರ ಕೃತ್ಯ. ಯಾವುದೇ ನರಮೇಧಕ್ಕೂ ಕಡಿಮೆಯಿಲ್ಲದ ಕಡುಪಾತಕ ಕೃತ್ಯವಿದು. ಅಂತಹ ಅಮಾನವೀಯವಾದ ಪ್ರಜ್ಞೆ ಮುಂದೆ ದ್ವೇಷದ ಜ್ವಾಲೆಯಾಗಿ ಇಡೀ ದೇಶವನ್ನೇ ಹಬ್ಬಿ ಜನರ ತಲ್ಲಣಕ್ಕೆ ಕಾರಣವಾದದ್ದು ಇಂದಿನ ದುರಂತ. ಭೂಕಂಪದ ಪ್ರಕೃತಿ ವಿಕೋಪಕ್ಕೆ ನಡುಗಿ ಅಲ್ಲಾಡಿಹೋಗಿದ್ದ ಗುಜರಾತಿನ ಜನರ ಅಸ್ತವ್ಯಸ್ತ ಜೀವನ ಗೋಧ್ರಾದ ಪರಿಣಾಮದ ನಂತರದ ಗುಜರಾತಿನ ಹತ್ಯೆಗಳಿಂದ ಮತ್ತೊಮ್ಮೆ ತತ್ತರಿಸಿದೆ. ಅವರಿಗೆ ಭೂಕಂಪನಕ್ಕಿಂತಲೂ ಭೀಕರವಾದ ಅನುಭವವಾಗಿರಲು ಸಾಕು. ಆಸ್ತಿಯ ಧ್ವಂಸ ಮತ್ತು ಜೀವಹಾನಿಯ ಪರಿಣಾಮ ಊಹೆಗೂ ನಿಲುಕದ್ದು. ಈ ಘಟನೆಯ ಧ್ವನಿ ದೇಶದ ಉಳಿದೆಡೆಗಳಲ್ಲೂ ಪ್ರತಿಧ್ವನಿಸಿ ಕಳವಳಗಳು ಇನ್ನೂ ಹೆಚ್ಚಾಗಿವೆ.

ಒಂದು ದಶಕದ ಹಿಂದೆ ರಥಯಾತ್ರೆಗಳು ನಾಂದಿ ಹಾಡಿದ ಈ ದ್ವೇಷದ ಜ್ವಾಲೆ ತನ್ನ ಕಾವನ್ನು ಗರ್ಭದಲ್ಲಿಯೇ ಇರಿಸಿಕೊಂಡು ಯಾವಾಗ ಬೇಕಾದರೂ ಸ್ಫೋಟಿಸಬಲ್ಲ ಅಣುಬಾಂಬುಗಳಾಗಿವೆ. ಈ ಬಾಂಬುಗಳ ಜನಕರಾಗಿ ಮತೀಯ ಸಂಘಟನೆಗಳು ದೇಶದ ಜಾತ್ಯಾತೀತ ಸ್ವರೂಪವನ್ನೇ ಅಣಕಿಸುತ್ತಿವೆ. ಅಷ್ಟೇ ಅಲ್ಲ ರಾಜಾರೋಷವಾಗಿ ಒರಿಸ್ಸಾದಲ್ಲಿ ಅಸೆಂಬ್ಲಿಯ ಮೇಲೆ ಆಕ್ರಮಣ ಮಾಡಿ ಜನಪ್ರತಿನಿಧಿಗಳ ತಾಣವನ್ನೂ ಅಭದ್ರತೆಯ ನೆಲೆಯಾಗಿಸಿವೆ. ರಾಮನಾಪ ಜಪಿಸಿಕೊಂಡು ಅಧಿಕಾರಕ್ಕೆ ಬಂದ ಭಾರತೀಯ ಜನತಾ ಪಕ್ಷದ ಸಂಸ್ಕೃತಿಯ ವಕ್ತಾರರೇ ದೇಶದ ಇಂದಿನ ಎಲ್ಲ ಅನಾಹುತಕ್ಕೆ ಕಾರಣವೆಂದು ಶಾಂತಿಪ್ರಿಯರೆಲ್ಲಾ ಒಕ್ಕೊರಲಿನಿಂದ ಕೂಗುತ್ತಿದ್ದರೂ ಕೇಂದ್ರ ಸರ್ಕಾರ ಅನಗತ್ಯವಾಗಿ ಅಪರಾಧಿಗಳನ್ನು ರಕ್ಷಿಸಲು ಹೊರಟಿದೆ. ತನ್ನ ರಕ್ಷಣೆಗೆ ಪೋಟೊ ಕವಚವನ್ನು ಧರಿಸಲು ಉತ್ಸುಕವಾಗಿದೆ. ರಾಷ್ಟ್ರೀಯ ಪ್ರಜಾಸತಾತ್ಮಕ ಒಕ್ಕೂಟದ ಅಂಗಪಕ್ಷಗಳು ಬಾಯುಪಚಾರಕ್ಕೆ ಬಾ.ಜ.ಪದ ಧೋರಣೆಯನ್ನು ವಿರೋಧಿಸುತ್ತಿದ್ದರೂ ಅಧಿಕಾರದ ಆಸೆಯಲ್ಲಿ ಶಾಂತಿಸ್ಥಾಪನೆಗೆ ಪ್ರಯತ್ನಿಸುತ್ತಿಲ್ಲ.

ಈ ಎಲ್ಲ ದುಸ್ವಪ್ನಗಳ ಸರಮಾಲೆಯ ನಡುವೆಯೂ ಶಾಂತಿಪ್ರಿಯ ಜನತೆ ಭವಿಷ್ಯದ ಭಾರತಕ್ಕಾಗಿ ಶಾಂತಿ ಮಂತ್ರ ಜಪಿಸುತ್ತಿದೆ. ಗುಜರಾತಿನ ಕರಾಳ ಅನುಭವದ ನಡುವೆಯೇ ಹಿಂದುಗಳು ಮುಸ್ಲಿಂರನ್ನು ರಕ್ಷಿಸಿ ಭ್ರಾತೃತ್ವವನ್ನು ಮೆರೆದ ಕೆಲವೊಂದು ಅಪರೂಪದ ಘಟನೆಗಳು ರೋಮಾಂಚಕಾರಿಯಾವೆ, ಭರವಸೆಯ ಚಿಗುರುಗಳನ್ನು ಹುಟ್ಟಿಸಿವೆ. ಇಂದು ಶಾಂತಿಪ್ರಿಯರೆಲ್ಲಾ ಒಗ್ಗಟ್ಟಿನಿಂದ ಸಂಘಟಿತರಾಗಿ ಎದ್ದುನಿಂತು ಮೂಲಭೂತವಾದಿಗಳ ಕಪಟನಾಟಕವನ್ನು ಬಯಲು ಮಾಡಿ ಇಂದಿನ ದೇಶದ ಸಾರ್ವಭೌಮತ್ವವನ್ನು ರಕ್ಷಿಸಬೇಕಾದದ್ದು ಅತ್ಯಂತ ತುರ್ತಾಗಿ ಆಗಬೇಕಾಗಿದೆ.

ಗಾಂಧಿ ಜನಿಸಿದ ನಾಡಿನಲ್ಲಿ ಗಾಂಧಿ ಜಪಿಸಿದ ರಾಮರಾಜ್ಯದ ಕಲ್ಪನೆಯನ್ನು ಅಧಿಕಾರಸ್ಥಮಂದಿ ವಿರೂಪಗೊಳಿಸಿ ಸ್ವಹಿತ ಸಾಧಿಸಲು ಹೊರಟಿರುವಾಗ ಭಾವುಕತೆಯ ಪದರಗಳನ್ನು ಕಳಚಿ ವೈಚಾರಿಕತೆಯ ಮಂತ್ರದಂಡದಿಂದ ಶಾಂತಿಲೋಕವನ್ನು ಸ್ಥಾಪಿಸುವುದು ಅಗತ್ಯವಾಗಿದೆ. ಇಂದು ದೇಶಧ ಬಹುಪಾಲು ಮಂದಿಗೆ, ಅವರು ಯಾವುದೇ ಕೋಮಿನವರಾಗಲೀ ಅಶಾಂತಿ, ಗಲಭೆ, ಕಗ್ಗೊಲೆಗಳು ಬೇಕಿಲ್ಲ. ರಾಮನ ಮಂದಿರವೂ ಬೇಡ, ಮಸೀದಿಯೂ ಬೇಡ. ಹೊಟ್ಟೆತುಂಬ ಊಟ, ನೆಮ್ಮದಿಯ ತಾವು, ಭದ್ರತೆಯ ಭವಿಷ್ಯ - ಇವುಗಳಿಗಾಗಿ ಪರಿತಪಿಸುತ್ತಿದ್ದಾರೆ. ಈ ಮಾನವೀಯ ಅಗತ್ಯಗಳ ಕಡೆಗೆ ಶಾಂತಿಪ್ರಿಯ ಜನತೆ ಎಲ್ಲರ ಗಮನ ಕೇಂದ್ರೀಕರಿಸಿ ಹೋರಾಟ ನಡೆಸಿದರೆ ಕಳೆದ ಹೋದ ಶಾಂತಿ ಪಕ್ಷಿ ಸಿಕ್ಕುವ ಸಾಧ್ಯತೆ ಉಂಟು.

ಮಹಿಳಾ ದಿನದ ಈ ಸಂದರ್ಭದಲ್ಲಿ ಮಹಿಳೆಯರು ಈ ಶಾಂತಿ ಪಕ್ಷಿಯ ಉಸಿರಿಗಾಗಿ ಸಂಘಟಿತರಾಗಬೇಕು. ಮತಾಂಧ ಕೋಮುವಾದಿ ಶಕ್ತಿಗಳು ಪ್ರಬಲವಾದರೆ, ಅಧಿಕಾರಕ್ಕೆ ಬಂದರೆ ಮಹಿಳೆಯರ ಜೀವನ ಎಷ್ಟೊಂದು ಘೋರವಾಗಿರಬಹುದೆಂಬ ಅನುಭವ ಇತ್ತೀಚಿನ ದಿನಗಳಲ್ಲಿ ನಮಗೆ ಹೆಚ್ಚು ವೇದ್ಯವಾಗಿದೆ. ಆದ್ದರಿಂದ ಇಂದು ನಾವು ಬದುಕುಳಿದರೆ, ಎಂದೆಂದೂ ಮುಂದೆ ಬದುಕಬಲ್ಲೆವು; ದೇಶವನ್ನು ಕಟ್ಟಬಲ್ಲೆವು. ಆದರೆ ಭವಿಷ್ಯವೇ ಅಸಂದಿಗ್ಧ, ಶೂನ್ಯವಾಗಿ ಬಿಟ್ಟರೆ ನಮ್ಮ ಅಸ್ತಿತ್ವಕ್ಕೇನು ಬೆಲೆ? ಶಾಂತಿ ಮಂತ್ರ ನಮ್ಮ ಬದುಕಿನ ದಿವ್ಯ ಮಂತ್ರವಾಗಬೇಕಿದೆ.

- ಎನ್. ಗಾಯತ್ರಿ

# ವಿಧವೆಯರ ಅಳಲು

ನನ್ನ ಸೋದರಸೊಸೆಯ ಮದುವೆಯಲ್ಲಿ ಭಾಗವಹಿಸಲು ಕಾತುರದಿಂದ ನಿರೀಕ್ಷಿಸುತ್ತಿದ್ದೆ. ಮದುವೆಯಲ್ಲಿ ವಯಸ್ಸಿನಲ್ಲಿ ಹಿರಿಯಳಾದ ನನ್ನ ಉಪಸ್ಥಿತಿಯು ಸ್ವಾಗತರ್ಹವೇ ಎಂದೂ ನಾನು ಭಾವಿಸಿದ್ದೆ. ಅದು ಬಂದು ಬಳಗದವರನ್ನು ಅದರಲ್ಲೂ ಈಚಿನ ತಲೆಮಾರಿನವರನ್ನು ಭೇಟಿಯಾಗಲು ಸದವಕಾಶವಾಗಿತ್ತು. ನಾನು ಸಂದರ್ಭಕ್ಕೆ ತಕ್ಕುದಾದ ಸೀರೆ-ಒಡವೆ ಧರಿಸಿದ್ದೆ, ಎಲ್ಲರೂ ನನ್ನನ್ನು ಬಹಳ ಆತ್ಮೀಯತೆಯಿಂದ, ಗೌರವಾದರಗಳಿಂದ ಮಾತನಾಡಿಸಿದರು.

ಆಗಲೇ ಪುರೋಹಿತರು ಎಲ್ಲರೂ ಮಂಗಳಸೂತ್ರವನ್ನು ಮುಟ್ಟಿ ಆಶೀರ್ವದಿಸಬೇಕು. ಸುಮಂಗಲಿಯರು ಬರಬೇಕು ಎಂದು ಎಚ್ಚರಿಸಿದ್ದು. ಒಮ್ಮಿಂದೊಮ್ಮೆ ನನ್ನ ಬಳಗದವರು ಕಣ್ತಪಿಸಿ ನನ್ನತ್ತ ನೋಡಿದರು. ಅವರಲ್ಲಿ ಒಬ್ಬರಂತೂ 'ವಿಧವೆಯೊಬ್ಬಳು ಆ ಸಮಯದಲ್ಲಿ ಅಲ್ಲಿರುವುದು ಸರಿಯಲ್ಲ, ಹೊರಗೆ ಹೋಗಬೇಕೆಂದು' ಸೂಚಿಸಿದರು. ನಾನು ದಿಙ್ಮೂಢಳಾಗಿ ನಿಂತೆ, ಒಂದು ರೀತಿಯ ಮುಜುಗರದ ಮೌನ ಅಲ್ಲಿ ವ್ಯಾಪಿಸಿತು. ವಿಧವೆಯರ ಬಗ್ಗೆ ಪಕ್ಷಪಾತದ ಧೋರಣೆ ಇರುವುದು ಗೊತ್ತಿತ್ತು. ಆದರೆ ನನ್ನವರೇ ನನ್ನನ್ನು 'ಅವಲಕ್ಷಣದವಳು' ಎಂದು ನೋಡುತ್ತಾರೆ ಅಂದುಕೊಂಡಿರಲಿಲ್ಲ.

ಸಂಪ್ರದಾಯರೀತ್ಯಾ, ಒಂಟಿ ಮಹಿಳೆಯರಿಗೆ, ಅದರಲ್ಲೂ ಮಹಿಳೆಯರಿಗೆ ಈ ರೀತಿಯ ಅವಮಾನಗಳು ಒಂದಲ್ಲ ಒಂದು ರೀತಿಯಲ್ಲಿ ಆಗುತ್ತಲೇ ಇರುತ್ತವೆ. ದೇಶಾದ್ಯಂತ ವಿವಿಧ ಸಮಾಜಗಳಲ್ಲಿ ಅವರ ಬಗ್ಗೆ ಉಪಯೋಗಿಸುವ ಭಾಷೆ, ಧೋರಣೆ ಹಾಗೂ ಪದ್ಧತಿಗಳು ಪೂರ್ವಗ್ರಹ ಪೀಡಿತವಾಗಿವೆ. ನನ್ನಂತಹ ಸಶಕ್ತ ಮಹಿಳೆಯ ವಿಷಯ ಬಿಡಿ, ವಿಧವೆಯರಾದ ನಮ್ಮ ಮಹಿಳಾ ನಾಯಕಿಯರನ್ನು ಕೂಡ ಏನೋ ಅಸಹಜವೆಂಬಂತೆ ನೋಡುತ್ತಾರೆ. ಗಂಡನ ಅಂತ್ಯಕ್ರಿಯೆ ಸಂದರ್ಭದಲ್ಲಿ ಮಾತ್ರವಲ್ಲ, ಆಮೇಲೂ ಕೂಡ- ಅಂದರೆ ಇನ್ನು ಜೀವನ ಪೂರ್ತಿ ಕೆಲವು ಆಚಾರ ಪದ್ಧತಿಗಳನ್ನು ಪಾಲಿಸುವ ಮೂಲಕ ನಾವು ಮತ್ತಷ್ಟು ಅಪಮಾನಗಳನ್ನು ಎದುರಿಸುತ್ತೇವೆ. ಮತ್ತೊಂದು ಆಸಕ್ತಿಯುತ ಅಂಶವೆಂದರೆ ವಿಧವೆ ಎಂದಾಕ್ಷಣ ವಯಸ್ಸಾದ, ತನ್ನನ್ನು ತಾನೇ ನೋಡಿಕೊಳ್ಳಲಾಗದ, ಅಸಹಾಯಕ, ಬಟ್ಟೆ ಬರೆ ಚೆನ್ನಾಗಿಲ್ಲದ ಕುರೂಪಿ ಎಂದೇ ಸಾಮಾನ್ಯವಾಗಿ ಚಿತ್ರ ಮೂಡುತ್ತದೆ.

ವಿಧವೆಯ ಈ ಕುರಿತಾದ ಚಿತ್ರಣಕ್ಕೆ ಮಾಧ್ಯಮಗಳು ಹಾಗೂ ಅಧಿಕಾರದಲ್ಲಿರುವವರ ಹೇಳಿಕೆಗಳು ಇಂಬು ಕೊಡುತ್ತವೆ. ಯುದ್ಧಗಳು, ಬಡತನ, ನೈಸರ್ಗಿಕ ದುರ್ಘಟನೆಗಳು, ಭಯೋತ್ಪಾದನೆ, ಭೂಪಾಲ್ ಅನಿಲದುರಂತ ಮತ್ತು ಏಡ್ಸ್ ಮುಂತಾದ ಮಾನವ ಕೃತ ದುರ್ಘಟನೆಗಳು ಹೆಚ್ಚು ಹೆಚ್ಚು ಮಂದಿ ಎಳೆಯ ವಿಧವೆಯರಿರುವ ಪರಿಸ್ಥಿತಿ ಉಂಟುಮಾಡುತ್ತಿರುವುದು ಇಂದು ಚಿಂತೆಗೀಡುಮಾಡುವ ವಿಷಯವೇ. ಜೊತೆಗೆ ಭಾರತದಲ್ಲಿ ಬಾಲ್ಯ ವಿವಾಹಗಳೂ ನಡೆಯುತ್ತಿವೆ: ಎಳೆಯ ಹುಡುಗಿಯರನ್ನು ವೃದ್ಧರಿಗೆ ಮದುವೆ ಮಾಡಿಕೊಟ್ಟು, ಸಹಜವಾಗಿಯೇ ಹುಡುಗಿಯರು ವಿಧವೆಯರಾಗುತ್ತಾರೆ.

ವಿಧವೆಯರ ಸಮಸ್ಯೆಗಳು ಹಾಗೂ ಒಂಟಿ ಮಹಿಳೆಯರು ಮತ್ತು ವಿಧವೆಯರ ಬಗ್ಗೆ ಇರುವ ಪಕ್ಷಪಾತ ನಿಲುವುಗಳು ಮತ್ತು ಪೂರ್ವಗ್ರಹಗಳನ್ನು ಹೇಗೆ ಕಿತ್ತೊಗೆಯಬೇಕು ಮುಂತಾದ ಅಂಶಗಳನ್ನು ಲಿಂಗ ಹಕ್ಕುಬಾಧ್ಯತೆಗಳ ಕಾರ್ಯಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಸೇವಾ ಸಂಸ್ಥೆಗಳು ಹಾಗೂ ನಾಗರಿಕ ಸಮಾಜದ ಸಂಘಗಳು ಚರ್ಚೆ ವಾದವಿವಾದಗಳನ್ನು ಏರ್ಪಡಿಸಲು ಮುಂದೆ ಬರುವುದು ಹಿಂದೆಂದಿಂಗಿಂತಲೂ ಈಗ ಹೆಚ್ಚು ಅಗತ್ಯ.

UNIFEM ಮುಂತಾದ ಸಂಸ್ಥೆಗಳು ಈಗಾಗಲೇ ಈ ಬಗ್ಗೆ ಧ್ವನಿಯೆತ್ತಿವೆ. ವಿಧವೆಯರ ಬಗ್ಗೆ ದಕ್ಷಿಣಾ ಏಷ್ಯಾ ಸಮ್ಮೇಳನವೊಂದು ಸದ್ಯದಲ್ಲೇ ನಡೆಯಲಿದೆ. ಇವುಗಳಿಂದ ಇನ್ನೇನೂ ಆಗದಿದ್ದರೂ, ಸಮಸ್ಯೆಯೆನ್ನಂತೂ ಸಾರ್ವಜನಿಕರ ಗಮನಕ್ಕೆ ತಂದಿರುತ್ತದೆ. ಇದುವರೆಗೂ ವಿಧವೆಯರ ಗೋಳು ಅಂತರಂಗಿಕವಾಗಿತ್ತು. ಈ ಬಗ್ಗೆ ಅಂತಾರಾಷ್ಟ್ರೀಯ ಸಮ್ಮೇಳನವೆಂಬುದನ್ನೇ ಕೇಳಿರಲಿಲ್ಲ.

ದಕ್ಷಿಣ ಏಷ್ಯಾದ ಎಲ್ಲ ದೇಶಗಳಲ್ಲಿಯೂ ಲಿಂಗಭೇದ ಸಮಸ್ಯೆಗಳ ಕುರಿತಾದ ನಿಲುವು-ಧೋರಣೆಗಳು ಸಮನಾಗಿವೆ. ನಕಾರಾತ್ಮಕವಾಗಿವೆ. ಈ ಎಲ್ಲ ದೇಶಗಳಲ್ಲಿಯೂ ವಿಧವೆಯರು ಎದುರಿಸುವ ಸಾಮಾಜಿಕ, ಆರ್ಥಿಕ ಮತ್ತು ಕಾನೂನು ನ್ಯೂನತೆಗಳು ಒಂದೇ. 'ಸಮಾನ ನ್ಯಾಯ' ಇವರಿಗೂ ಇರುವ ಮೂಲಭೂತ ಹಕ್ಕು. ಆದರೆ ಸಂಪ್ರದಾಯವೆಂದೂ ಅಥವಾ ಪದ್ಧತಿಯೆಂದೋ, ಈ ಹಕ್ಕನ್ನು ಇವರಿಗೆ ನಿರಾಕರಿಸಲಾಗಿದೆ. ಗಂಡ ಸತ್ತ ಹೆಂಡತಿಯ ಸ್ಥಿತಿಯನ್ನು ಒಂದು ಕೆಟ್ಟ ಬೈಗುಳಾಗಿ ಉಪಯೋಗಿಸಲಾಗಿಸುತ್ತದೆ. ಅವರನ್ನು ಬಹಿಷ್ಕರಿಸಲಾಗುತ್ತದೆ, ಸಾಮಾನ್ಯ ಜೀವನ ನಡೆಸುವ ಹಕ್ಕನ್ನು ಕಿತ್ತುಕೊಳ್ಳಲಾಗುತ್ತದೆ ಹಾಗೂ ಅನೇಕ ಬಾರಿ, ಆಸ್ತಿ ಹಕ್ಕುಗಳನ್ನು ಕಿತ್ತುಕೊಳ್ಳಲಾಗುತ್ತದೆ.

'ಹಕ್ಕುರಹಿತ ವಿಧವೆಯರು' ಎಂಬ ಇತ್ತೀಚಿನ ಸಮ್ಮೇಳನದಲ್ಲಿ ಅಫ್ರಿಕಾ ದೇಶಕ್ಕೂ ಹಾಗೂ ಇಲ್ಲಿಗೂ ಇರುವ ಸಾಮ್ಯತೆ ಕಂಡು ನನಗೆ ಆಘಾತವಾಯಿತು. ಅಫ್ರಿಕಾದಲ್ಲಿಯೂ, ವಿಧವೆಯರ ಪಟ್ಟದ ಸುತ್ತಲೂ ಅನೇಕ ಕಾಲ್ಪನಿಕ ಕತೆಗಳಿವೆ. ಇವುಗಳ ಹಿಂದೆ ಯಾರೇ ಇಣುಕಿ ನೋಡಿದರೂ ವಿಪರೀತ ಪರಿಣಾಮುಗಳನ್ನು ಎದುರಿಸಬೇಕಾಗುತ್ತದೆ. ಉದಾ: ಆಫ್ರಿಕಾದಲ್ಲಿ ಹೆಂಡತಿಯೇ ಗಂಡನ ಸಾವಿಗೆ ಕಾರಣಳಾಗುತ್ತಾಳೆ. ಆದ್ದರಿಂದ ಅವಳಿಗೆ ಶಿಕ್ಷೆ ಕೊಡಲಾಗುತ್ತದೆ ಹಾಗೂ ಕೆಲವು ಅಪಾಯಕಾರಿ ಆಚಾರಗಳನ್ನು ಅವಳ ಮೇಲೆ ಹೇರಲಾಗುತ್ತದೆ. ನಮ್ಮಲ್ಲಿಯೂ ಇದನ್ನು ನಾನು ಕಂಡಿದ್ದೇನೆ. ಹೆಂಡತಿಯೇ ಗಂಡನಿಗೆ ದುರಾದೃಷ್ಟ ತಂದಳೆಂದೂ,

ಅವನ ಸಾವಿಗೆ ಇದೇ ಕಾರಣವಾಯಿತೆಂದೂ ದೂಷಿಸುತ್ತಾರೆ. ಆದರೆ ಹೆಂಡತಿ ಸತ್ತಸಂದರ್ಭದಲ್ಲಿ ಅವನು ಒಬ್ಬಂಟಿಗನಾಗಿ ಬಿಟ್ಟ, ಅವನಿಗೆ ಸಂಗಾತಿಯ ಅವಶ್ಯಕತೆಯಿದೆ ಎಂದು ಓಲೈಸುತ್ತಾರೆ. ಶೋಕಾವಧಿ ಮುಗಿಯುವ ಮುಂಚೆಯೇ ಅವನು ಮತ್ತೆ ಮದುವೆ ಮಾಡಿಕೊಳ್ಳಲೂ ಬಹುದು.

ಒಬ್ಬ ಹಿಂದೂ ಮಹಿಳೆಯು ತನ್ನಗಂಡನ ಆಸ್ತಿ ಹೊಂದಿದ್ದಲ್ಲಿ ಕಾನೂನು ರೀತಿ ಅದರಿಂದಲೇ ನಿರ್ವಹಣಾ ವೆಚ್ಚವನ್ನು ತೆಗೆದುಕೊಳ್ಳವ ಅಧಿಕಾರ ಅವಳಿಗಿದೆ. ಪ್ರತ್ಯೇಕ ನಿರ್ವಹಣಾ ವೆಚ್ಚದ ಬದಲಿಗೆ ಆಸ್ತಿಯನ್ನೇ ಹೊಂದುವ ಅಧಿಕಾರವಿದೆ. ಗಂಡ ಬದುಕಿರುವಾಗಲೇ ಯಾರೊಬ್ಬ ಮಹಿಳೆಯೂ ತನ್ನ ಗಂಡನನ್ನು ವಿಲ್ಲಿನ ಬಗ್ಗೆ ಪ್ರಶ್ನಿಸಲಾರಳು. ಹಾಗೆ ಕೇಳುವುದು ಅಪಶಕುನ ಹಳ್ಳಿಗಳಲ್ಲಿರುವ ಓದು ಬರಹ ಕಲಿತಿಲ್ಲದ ವಿಧವೆಯರಿಗಂತೂ ಜೀವನೋಪಾಯಕ್ಕೆ ಏನೂ ಇಲ್ಲದಿರುವುದರಿಂದ ಸಮಸ್ಯೆಗಳು ಅನೇಕ. ಸಾಮಾನ್ಯವಾಗಿ ಹೊಲಗದ್ದೆಗಳ ಹಕ್ಕುಗಳೆಲ್ಲ ಕೈಬಿಟ್ಟು ಹೋಗುತ್ತವೆ. ಗಂಡನ ಸಂಬಂಧಿಕರ ಕೃಪಾಶ್ರಯದಲ್ಲಿ ಅವಳು ಇರಬೇಕಾಗುತ್ತದೆ. ನಿಜ ಹೇಳಬೇಕೆಂದರೆ, ವಿಧವೆಯರಿಗೆ ನನ್ನವರು-ತನ್ನವರು ಅನ್ನುವವರ್‍ಯಾರೂ ಇಲ್ಲ. ಕುಟುಂಬ, ಸಮಾಜ ಮತ್ತು ಸಮುದಾಯವನ್ನೆದುರಿಸಿ ಒಬ್ಬಳೇ ಬಾಳ ಹೊರೆ ಹೊರಬೇಕಾಗುತ್ತದೆ. ಹೆಚ್ಚಿನ ಸಲ, ಮಕ್ಕಳೂ ಕೂಡ ಶಾಲೆ ತೊರೆದು ಬಾಳುವ ಮಾರ್ಗ ಕಂಡು ಹಿಡಿಯಬೇಕಾಗುತ್ತದೆ.

1993ರಲ್ಲಿ ಮಾನವ ಹಕ್ಕುಗಳ ಬಗ್ಗೆ ವಿಶ್ವ ಸಮ್ಮೇಳನ ನಡೆಯಿತು. ಇದರಲ್ಲಿ 'ಮಹಿಳೆಯರಿಗೆ ಹಿಂಸೆ'ಯೂ ಸೇರ್ಪಡೆಯಾಗಿತ್ತು. 1995ರಲ್ಲಿ ಬೀಜಿಂಗ್ ಸಮ್ಮೇಳನವಾಯಿತು. ಹೀಗೆ ಅಂತರ್‍ರಾಷ್ಟ್ರೀಯ ಮಹಿಳಾ ಚಳುವಳಿ ಬಹಳದೂರ ಸಾಗಿ ಬಂದಿದೆ. ಆದರೂ ಸಕಾರಾತ್ಮಕ ಪ್ರತಿಫಲಗಳು ಕಂಡುಬರಬೇಕೆಂದರೆ ಮಹಿಳಾ ಚಳುವಳಿಗಳು ಒಗ್ಗೂಡಬೇಕು. ಸಂಪ್ರದಾಯಗಳಲ್ಲೇ ಬೆಳೆದು ಬಂದಿರುವ ಪಕ್ಷಪಾತ ನೀತಿಯನ್ನು ಎದುರಿಸಬೇಕು. ಮಹಿಳೆಯರು ತಮ್ಮ ಸಾಮರ್ಥ್ಯವನ್ನು ಸಂಪೂರ್ಣವಾಗಿ ಸದುಪಯೋಗ ಮಾಡಿಕೊಳ್ಳಲು ಅಡ್ಡಿ ಬರುವ ವ್ಯವಸ್ಥೆಯನ್ನು ಎದುರಿಸಬೇಕು. ವಿಧವೆಯರ ಮಾನವ ಹಕ್ಕುಗಳನ್ನು ಗುರುತಿಸಿ-ಸಂರಕ್ಷಿಸಲು ಸರ್ಕಾರ ಪ್ರಗತಿಪರ ಹಾಗೂ ಸಹಾಯಕಾರಿ ಪರಿಸರ ಬೆಳೆಸಬೇಕೆಂದು ಸರ್ಕಾರವನ್ನು ಒತ್ತಾಯಿಸಬೇಕು.

**- ವಿ. ಮೋಹಿನಿ ಗಿರಿ**


## Statement about ownership and other Particulars about Newspaper ACHALA

**Form IV (see Rule 8)**

| | | |
|---|---|---|
| 1. Place of publication | : | Bangalore, Karnataka state |
| 2. Peridicity Publication | : | Monthy |
| 3. Printer's Name, Address | : | Lipi Mudrana, Gandhi Bazar, Basavangudi, Bangalore-4. |
| 4. Publisher's Name | : | Dr. G. Ramakrishna for Jagrathi Mahila Adhyayana Kendra, Bangalore. |
| 5. Nationality | : | Indian |
| Address | : | 108, Skyline Surabhi, 14-p, Vidyapeeta Road, B.S.K. III Stage, Bangalore-85 |
| 6. Editor's Name | : | Dr. N. Gayathri |
| Nationality | : | Indian |
| Address | : | 108, Skyline Surabhi, 14-p, Vidyapeeta Road, B.S.K. III Stage, Bangalore-560 085. |
| 7. Name of Address of individuals who own the news Paper | : | Jagruthi Mahila Adhyayana Kendra, 108, Skyline Surabhi, 14-p, Vidyapeeta Road, B.S.K. III Stage, Bangalore-560 085. |

I, Dr. G. Ramakrishna here by declare that the particulars given above are true to the best of my knowledge and belief.

Sd/-

Bangalore
Date-25-3-2002

G. Ramakrishna

# ಕ್ರಾಂತಿಕಾರಿ ಮಹಿಳೆ ಕ್ಲಾರ್ ಜೆಟ್‌ಕಿನ್

ಜರ್ಮನ್ ಪ್ರಾಂತ್ಯದ ಸ್ಯಾಕ್ಸೋನಿಯ ಚಿಕ್ಕ ಹಳ್ಳಿ ವಿದೇರೋವಿನಲ್ಲಿ ಕ್ಲಾರಾಜೆಟ್‌ಕಿನ್ 1857ರ ಜುಲೈ 5ರಂದು ಜನಿಸಿದಳು. ತಂದೆ ಎಚ್. ಪಿಸ್ನರ್ ಹಳ್ಳಿಯ ಶಾಲಾಮಾಸ್ತರ್. ಹದಿನೇಳು ವರ್ಷದವಳಿದ್ದಾಗ ಕ್ಲಾರಾ ಲೈಪ್‌ಜಿಗ್‌ನಲ್ಲಿ ಶಿಕ್ಷಕರಿಗೆ ತರಬೇತಿ ನೀಡುವ ಮಹಿಳಾ ಕಾಲೇಜಿಗೆ ಪ್ರವೇಶ ಪಡೆದಳು. ನಾಲ್ಕು ವರ್ಷಗಳು ಅಭ್ಯಾಸ ಮಾಡಿದ ಕ್ಲಾರಾಗೆ ಇಲ್ಲಿ ಆಗಸ್ಟ್ಸ್ಮಿಟ್‌ರಿಂದ ತರಬೇತಿ ಪಡೆಯುವ ಅವಕಾಶ ಸಿಕ್ಕಿತು. ಆಗಸ್ಟ್ ಅಂದಿನ ದಿನಗಳಲ್ಲಿ ಜರ್ಮನಿಯ ಮಹಿಳಾ ಚಳುವಳಿಯಲ್ಲಿ ಬಹು ದೊಡ್ಡ ಹೆಸರಾಗಿದ್ದು ಆ ಶತಮಾನದ ಕೊನೆಯವರೆಗೂ ಮಹಿಳಾ ಚಳುವಳಿಯಲ್ಲಿ ಸಕ್ರಿಯವಾಗಿದ್ದರು. ಲೈಪ್‌ಜಿಗ್‌ನಲ್ಲಿದ್ದಾಗಲೇ ಕ್ಲಾರಾಗೆ ಹಲವಾರು ಕ್ರಾಂತಿಕಾರಿ ಸಮಾಜವಾದಿ ವಿದ್ಯಾರ್ಥಿಗಳ ಒಡನಾಟ ಸಿಕ್ಕುವ ಅವಕಾಶ ಒದಗಿಬಂತು. ಇವರೆಲ್ಲಾ ರಷ್ಯಾದ ಆಳ್ವಿಕೆಯಲ್ಲಿದ್ದ ಪೋಲೆಂಡ್‌ನಿಂದ ಬಂದಿದ್ದವರಾಗಿದ್ದರು. ಆ ಗುಂಪಿನಲ್ಲಿದ್ದ ಓಸಿಪ್ ಜೆಟ್‌ಕಿನ್‌ನೊಂದಿಗೆ ನಿಕಟ ಗೆಳೆತನ ಬೆಳೆಸಿದ ಕ್ಲಾರಾ ಮುಂದೆ ಅವನನ್ನೇ ಮದುವೆಯಾದಳು. ಈ ಗುಂಪಿನ ಗೆಳೆಯರ ಒಡನಾಟದಲ್ಲಿ ಕ್ಲಾರಾ ಮಾರ್ಕ್ಸ್‌ವಾದದ ಪ್ರಾಥಮಿಕ ತಿಳುವಳಿಕೆ ಮತ್ತು ತರಬೇತಿಯನ್ನು ಪಡೆದಳು. ಹಾಗೆಯೇ ರಷ್ಯಾದಲ್ಲಿ ನಡೆಯುತ್ತಿದ್ದ ಕಾರ್ಮಿಕರ ಚಳುವಳಿಗೆ ಸಂಬಂಧಪಟ್ಟ ಬೌದ್ಧಿಕ ವಾಗ್ವಾದಗಳಲ್ಲಿ ನಿಷ್ಣಾತಳಾದಳು.

1870ರಿಂದಾಚೆಗೆ ಕ್ಲಾರಾ ಜರ್ಮನ್ ಸಮಾಜವಾದಿ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದಳು. ಸಮಾಜವಾದಿಗಳನ್ನು ನಿಷೇಧಿಸುವ ವಿಶೇಷ ಕಾನೂನನ್ನು 1881ರಲ್ಲಿ ಬಿಸ್‌ಮಾರ್ಕ್ ತಂದ ನಂತರ ಕ್ಲಾರ್ ಜರ್ಮನ್ ಸೋಷಿಯಲ್ ಡೆಮಾಕ್ರಟಿಕ್ ಪಕ್ಷದ ಸದಸ್ಯತ್ವ ಪಡೆದದ್ದಲ್ಲದೆ ಅದರ ಕಾನೂನು ಬಾಹಿರ ಚಟುವಟಿಕೆಗಳಲ್ಲಿ ಭಾಗವಹಿಸಿದಳು. 'ಅನಪೇಕ್ಷಿತ ಪರಕೀಯ'ನೆಂಬ ಹಣೆಪಟ್ಟಿ ಹೊತ್ತು ಅವಳ ಗಂಡ ಜರ್ಮನಿಯಿಂದ ಉಚ್ಛಾಟಿತನಾದಾಗ ಕ್ಲಾರಾ ಕೂಡ ಗಂಡನೊಂದಿಗೆ ಜರ್ಮನಿ ಬಿಟ್ಟು ರಾಜಕೀಯ ವಲಸೆಗಾರಳಾದಳು. ಫ್ರಾನ್ಸ್, ಆಸ್ಟ್ರಿಯಾ ಮತ್ತು ಇಟಲಿಯ ಸಮಾಜವಾದಿ ಚಳುವಳಿಗಳಲ್ಲಿ ಸಕ್ರಿಯ ಪಾತ್ರ ವಹಿಸಿದಳು. ಸ್ವಿಟ್ಜರ್‌ಲ್ಯಾಂಡ್‌ನಲ್ಲಿದ್ದಾಗ ಅವಳು ಕಾನೂನು ಬಾಹಿರ ಪತ್ರಿಕೆ Der Sozial Democraನ್ನು ಸಂಪಾದಿಸುತ್ತಿದ್ದಳು. ಜ್ಯೂರಿಚ್‌ನಿಂದ ಬರುತ್ತಿದ್ದ ಈ ಪತ್ರಿಕೆಯು ಜರ್ಮನಿಯಲ್ಲೆಲ್ಲಾ ಪ್ರಸಾರವಾಗುವಂತೆ ಕ್ಲಾರಾ ದುಡಿದಳು. ಪ್ಯಾರಿಸ್ಸಿನಲ್ಲಿದ್ದಾಗ ಅವಳು ಕಾರ್ಲ್ ಮಾರ್ಕ್ಸ್‌ರ ಮಗಳು ಲಾರಾ ಲಫಾರ್ಗ್‌ರಿಗೆ ಅತ್ಯಂತ ನಿಕಟವಾಗಿದ್ದಳು. ಅಷ್ಟೇ ಅಲ್ಲದೆ ಫ್ರಾನ್ಸಿನ ಸಮಾಜವಾದಿ ಚಳುವಳಿಯ ಮುಖಂಡರಾದ ಪಾಲ್ ಲಫರ್ಗ್ ಮತ್ತು ಜ್ಯೂಲ್ಸ್ ಗಸ್‌ದರವರಿಗೂ ನಿಕಟವರ್ತಿಯಾಗಿದ್ದಳು.

**1907 ಮಾರ್ಚ್ 8ರಂದು ನ್ಯೂಯಾರ್ಕಿನ ಸಿದ್ಧ ಉಡುಪುಗಳ ಕಾರ್ಖಾನೆಯ ಮಹಿಳೆಯರು ನೂರಾರು ಸಂಖ್ಯೆಯಲ್ಲಿ ಬೀದಿಗಿಳಿದರು. ತಮ್ಮ ಆರ್ಥಿಕ ಹೋರಾಟಗಳಿಗೆ ಬೀದಿಗಿಳಿದ ಈ ಮಹಿಳೆಯರ ಹೋರಾಟದ ಗೌರವಾರ್ಥ ವಿಶ್ವದಲ್ಲೆಡೆ ಮಹಿಳಾದಿನವನ್ನು ಆಚರಿಸಲಾಗುತ್ತಿದೆ. ಈ ಮಹಿಳಾ ದಿನಾಚರಣೆಯ ಘಟನೆಯ ಹಿಂದೆ ಬಹುಮುಖ್ಯವಾಗಿ ಕೇಳಿ ಬರುವ ಹೆಸರು ಕ್ರಾಂತಿಕಾರಿ ಮಹಿಳಾ ನಾಯಕಿ ಕ್ಲಾರಾ ಜೆಟ್‌ಕಿನ್. ನ್ಯೂಯಾರ್ಕಿನ ಮಹಿಳೆಯರ ಹೋರಾಟವನ್ನು ಗೌರವಿಸಿದ ಜರ್ಮನ್ ನಾಯಕಿ ಕ್ಲಾರಾಜೆಟ್‌ಕಿನ್ 1910ರಲ್ಲಿ ಎರಡನೆಯ ಸಮಾಜವಾದಿ ಅಂತರರಾಷ್ಟ್ರೀಯ ಸಮಾವೇಶದಲ್ಲಿ ಮಾರ್ಚ್ 8ನ್ನು ಅಂತರ ರಾಷ್ಟ್ರೀಯ ಮಹಿಳಾದಿನವನ್ನಾಗಿ ಆಚರಿಸಬೇಕೆಂಬ ನಿರ್ಣಯ ಮಂಡಿಸಿದಳು. ಅದರ ಫಲವಾಗಿ 1911ರಿಂದ ವಿಶ್ವದಾದ್ಯಂತ ಮಾರ್ಚ್ 8ನ್ನು ಮಹಿಳಾದಿನವನ್ನಾಗಿ ಆಚರಿಸಲಾಗುತ್ತಿದೆ. ಮಹಿಳಾ ದಿನದ ಮಾತೆ ಕ್ಲಾರಾಜೆಟ್‌ಕಿನ್‌ಳನ್ನು ಪರಿಚಯಿಸುವ ಲೇಖನವಿದು.**

1889ರಲ್ಲಿ ಪ್ಯಾರಿಸ್ಸಿನಲ್ಲಿ ನಡೆದ ಎರಡನೇ ಅಂತರರಾಷ್ಟ್ರೀಯ ಕಾಂಗ್ರೆಸ್‌ನ್ನು ಸಂಘಟಿಸುವುದರಲ್ಲಿ ಕ್ಲಾರಾ ಪ್ರಮುಖ ಪಾತ್ರ ವಹಿಸಿದಳು. ಸಮಾಜವಾದಕ್ಕಾಗಿ ನಡೆಯುವ ಕ್ರಾಂತಿಕಾರಿ ಹೋರಾಟದಲ್ಲಿ ಮಹಿಳೆ ಮಹತ್ವದ ಪಾತ್ರ ವಹಿಸಬೇಕೆಂದು ಈ ಕಾಂಗ್ರೆಸ್‌ನಲ್ಲಿ ಕ್ಲಾರಾ ಕರೆಕೊಟ್ಟಳು, ದುಡಿಯುವ ಮಹಿಳೆಯರ ಹೋರಾಟಕ್ಕಾಗಿ ಒಂದು ನಿಶ್ಚಿತ ಕಾರ್ಯಸೂಚಿಯ ಅಗತ್ಯವನ್ನು ವಿವರಿಸಿದಳು. ಮುಂದುವರಿದಂತೆ ಕ್ಲಾರಾ ಸ್ಪಷ್ಟಪಡಿಸಿದಳು: ''ಮಹಿಳೆಯರು ಸಮಸಮವಾಗಿ ಸಮಾಜವಾದಿ ಕಾರ್ಯಕರ್ತರೊಂದಿಗೆ ಜೊತೆ ಜೊತೆಯಾಗಿ ಹೋರಾಟದಲ್ಲಿ ತೊಡಗಿಕೊಂಡಾಗ ಮಾತ್ರ, ಹೋರಾಟದ ಎಲ್ಲ ಕಷ್ಟನಷ್ಟಗಳನ್ನು ಸಹಿಸಲು ತ್ಯಾಗ ಬಲಿದಾನಗಳನ್ನು ಮಾಡಲು ಸಾಧ್ಯವಾಗುತ್ತದೆ. ಆಗ ಮಾತ್ರ ಹೋರಾಟದ ಫಲಗಳನ್ನು ಸಮವಾಗಿ ಹಕ್ಕಿನಿಂದ ಪಡೆಯಲು ಸಾಧ್ಯವಾಗುತ್ತದೆ'' ಎಂದು ಭಾಷಣ ಮಾಡಿದಳ

ಹೀಗೆ ಮೊದಲಬಾರಿಗೆ ಅಂತರರಾಷ್ಟ್ರೀಯ ವೇದಿಕೆಯಲ್ಲಿ ಮಹಿಳಾ ಸಮಾನತೆಯ ಸಮರ್ಥನೆಯ ವಿಷಯವಾಗಿ ಕೇಳಿಬಂತು. ಕ್ಲಾರಾ ಜೆಟ್‌ಕಿನ್‌ಳ ವಿಶೇಷ ಪರಿಶ್ರಮದಿಂದಲೇ ಎರಡನೇಯ ಅಂತರರಾಷ್ಟ್ರೀಯ ಕಾಂಗ್ರೆಸ್ ವಿಶ್ವದ ವಿವಿಧ ಸಮಾಜವಾದಿ ರಾಷ್ಟ್ರಗಳ ಮಹಿಳೆಯರನ್ನು ಕ್ರಾಂತಿಕಾರಿ ಸಮಾಜವಾದಿ ಚಳುವಳಿಯಲ್ಲಿ ತೊಡಗಿಸಿಕೊಳ್ಳುವ ಮನಸ್ಸು ಮಾಡಿತು. ಈ ಕಾಂಗ್ರೆಸ್ 'ಮಹಿಳಾ ಪ್ರಶ್ನೆ'ಗೆ ಸಂಬಂಧ ಪಟ್ಟಂತೆ 1890ರ ಸೋಷಿಯಲ್ ಡೆಮಾಕ್ರಟಿಕ್ ಪಕ್ಷವು ಆರ್ಥಿಕ, ರಾಜಕೀಯ ಮತ್ತು ಕಾನೂನಿನ ಸಮಾನತೆಯು ಮಹಿಳೆಯರಿಗೆ ಸಂಪೂರ್ಣವಾಗಿ ದೊರೆಯಬೇಕೆಂದು ವಾದಿಸಿತು. ಇದಾದ ನಂತರ ಎರಡನೇ ಅಂತರರಾಷ್ಟ್ರೀಯ ಕಾಂಗ್ರೆಸ್‌ನ ಎಲ್ಲಾ ಸಮ್ಮೇಳನಗಳಲ್ಲೂ ಭಾಗವಹಿಸಿದಳು. ಕ್ಲಾರಾ ಈ ಸಮ್ಮೇಳನದಲಿ ಜರ್ಮನ್ ಪ್ರತಿನಿಧಿಗಳ ಭಾಷಣಗಳನ್ನು ಇಂಗ್ಲೀಷಿಗೆ ಭಾಷಾಂತರಿಸಿದಾಗ ಎಲ್ಲರೂ ಮೂಲಕ್ಕಿಂತ ಕ್ಲಾರಾಳ ಭಾಷಣ ಹೆಚ್ಚು ಕ್ರಾಂತಿಕಾರಿಯೂ, ಅರ್ಥಪೂರ್ಣವೂ ಆಗಿತ್ತೆಂದು ಮೆಚ್ಚಿಕೊಂಡರು. ಈ ಸಮ್ಮೇಳನದಲ್ಲಿ ಅವಳು ಆಗಸ್ಟ್ ಬೆಬೆಲ್‌ನ ಭಾಷಣವನ್ನು ಭಾಷಾಂತರಿಸಿದಳು. ಕ್ಲಾರ್ ಜೆಟ್‌ಕಿನ್‌ಳ ಪ್ರತಿಭೆ ಮತ್ತು ಸಾಮರ್ಥ್ಯವನ್ನು ಹತ್ತಿರದಿಂದ ಗಮನಿಸುತ್ತಿದ್ದ ಫ್ರೆಡರಿಕ್ ಏಂಗೆಲ್ಸ್ ಈ ಸಮ್ಮೇಳನದಲ್ಲಿ ಅವಳ ಕ್ರಿಯಾಶೀಲ ಭಾಗವಹಿಸುವಿಕೆಯನ್ನು ಅಪಾರವಾಗಿ ಮೆಚ್ಚಿಕೊಂಡಿದ್ದರು.

ಕ್ಲಾರಾ ತನ್ನ ಗಂಡನ ಸಾವಿನ ನಂತರ 1890ರಲ್ಲಿ ಜರ್ಮನಿಗೆ ಮತ್ತೆ ಹಿಂತಿರುಗಿದಳು, ಆ ವೇಳೆಗೆ ಸಮಾಜವಾದಿಗಳ ಮೇಲಿದ್ದ ನಿಷೇಧಿತ ಕಾನೂನನ್ನು ತೆಗೆದುಹಾಕಲಾಗಿತ್ತು. ಅಲ್ಲಿ ಸೋಷಿಯಲ್ ಡೆಮಾಕ್ರಟಿಕ್ ಪಕ್ಷದ ಮಹಿಳಾ ಶಾಖೆಯ ನೇತೃತ್ವ ವಹಿಸಿದಳು. 1892ರಿಂದ ಅಲ್ಲಿ Equality ಪತ್ರಿಕೆಯ ಸಂಪಾದಕಿಯಾಗಿ ಕೆಲಸ ಮಾಡಿದಳು. ಅಲ್ಲಿನ ದುಡಿಯುವ ವರ್ಗದ ಮಹಿಳೆಯರನ್ನು ಸಂಘಟಿಸಿ ಅವರಲ್ಲಿ ವರ್ಗ ಪ್ರಜ್ಞೆಯನ್ನು ಜಾಗೃತಗೊಳಿಸಬೇಕೆಂದು ಮತ್ತು ಬೂರ್ಷ್ವಾ ಮಹಿಳಾ ಚಳುವಳಿಯಿಂದ ದಾರಿತಪ್ಪದಂತೆ ಮಾರ್ಗದರ್ಶನ ನೀಡಬೇಕೆಂದು ಕ್ಲಾರಾ ಕಷ್ಟಪಟ್ಟು ದುಡಿದಳು. ಅವಳ ಅಪರಿಮಿತ ಶ್ರಮದಿಂದಾಗಿ ಜರ್ಮನಿಯ ಶ್ರಮಿಕ ಮಹಿಳಾ ಚಳುವಳಿ ಆರಂಭದಿಂದಲೂ ಬೃಹತ್ ಕಾರ್ಮಿಕ ಚಳುವಳಿಯ ಭಾಗವಾಗಿಯೇ ಬೆಳೆಯಿತು. ಮತದಾನದ ಚಳುವಳಿಗೇ ಮೀಸಲಾದ ಬೂರ್ಷ್ವಾ ಮಹಿಳಾ ಚಳುವಳಿಯಿಂದ ದೂರ ಉಳಿಯಿತು. ಕ್ಲಾರಾ ಜೆಟ್‌ಕಿನ ಮತ್ತು ಅವಳ ಗೆಳತಿಯರ ಸಂಘಟನಾಶ್ರಮದಿಂದ ಸಮಾಜವಾದಿ ಕಾರ್ಮಿಕ ಸಂಘಟನೆಯೊಳಗೆ ಹೆಚ್ಚು ಹೆಚ್ಚು ಮಹಿಳೆಯರು ಭಾಗವಹಿಸುವಂತಾಯಿತು. ಅವಳು ತಾನೇ ಸ್ವತಃ ಸ್ಟಟ್‌ಗಾರ್ಟ್ ಬುಕ್ ಬೈಂಡರ್ಸ್ ಕಾರ್ಮಿಕ ಸಂಘಟನೆಯ ಸದಸ್ಯಳಾಗಿ 25 ವರ್ಷಗಳ ಕಾಲ ಕೆಲಸ ಮಾಡಿದ್ದಾಳೆ. ಮತ್ತು ಹೊಲಿಗೆಗಾರರ ಕಾರ್ಮಿಕ ಸಂಘಟನೆಯಲ್ಲೂ ಕೆಲಸ ಮಾಡಿದಳು. ಲಂಡನ್‌ನಲ್ಲಿ 1896ರಲ್ಲಿ ನಡೆದ ಎರಡನೇ ಅಂತರಾಷ್ಟ್ರೀಯ ಕಾಂಗ್ರೆಸ್‌ನಲ್ಲಿ ಪ್ರಾಂತೀಯ ಅಂತರರಾಷ್ಟ್ರೀಯ ಕಾರ್ಯದರ್ಶಿಯಾಗಿ ಕ್ಲಾರಾ ಚುನಾಯಿತಳಾದಳು.

ಆಗ ಕ್ರಿಯಾಶೀಲವಾಗಿದ್ದ ಸ್ತ್ರೀವಾದಿ ಚಳುವಳಿಯು ಮಹಿಳಾ ಮತದಾನದ ಹಕ್ಕಿನ ಹೋರಾಟವಾಗಿ ಸೀಮಿತ ಆಶಯಗಳನ್ನು ಹೊಂದಿತ್ತು. ಮತ್ತು ಬೂರ್ಷ್ವಾ ಸಮಾಜದ ಶೋಷಣೆಯ ಸಂಬಂಧಗಳನ್ನು ಅಲುಗಾಡಿಸಿದೆಯೇ ತನ್ನ ಹೋರಾಟ ನಡೆಸಿತ್ತು. ಈ ಕಾರಣದಿಂದ ಆರಂಭದಿಂದಲೂ ಸಮಾಜವಾದಿ ಮಹಿಳಾ ಚಳುವಳಿಯು ಸ್ತ್ರೀವಾದಿ ಚಳುವಳಿಯೊಂದಿಗೆ ಸೇರದೆ ಅಡ್ಡಗೆರೆಯೊಂದನ್ನು ಎಳೆದುಕೊಂಡಿತ್ತು. 1896ರಲ್ಲಿ ಗೋಥ್‌ದಲ್ಲಿ ನಡೆದ ಸೋಷಿಯಲ್ ಡೆಮಾಕ್ರಟಿಕ್ ಪಕ್ಷದ ಕಾಂಗ್ರೆಸ್‌ನಲ್ಲಿ ಪ್ರತಿನಿಧಿಗಳನ್ನುದ್ದೇಶಿಸಿ ಮಾತನಾಡುತ್ತಾ ಕ್ಲಾರಾ ಹೇಳುತ್ತಾರೆ. ''ದುಡಿಯುವ ವರ್ಗದ ಮಹಿಳೆ ಆರ್ಥಿಕ ಸ್ವಾತಂತ್ರ್ಯವನ್ನು ಸಂಪಾದಿಸಿರುವುದು ಹೆಣ್ಣಾಗಿ ಇಲ್ಲವೇ ಹೆಂಡತಿಯಾಗಿ ಪಾತ್ರ ನಿರ್ವಹಿಸಿದ್ದಕ್ಕಲ್ಲ. ಆದರೆ ಸಾಮಾಜಿಕ ಉತ್ಪಾದನೆಯಲ್ಲಿ ಭಾಗವಹಿಸಿದ್ದಕ್ಕೆ. ಬದಲಿಗೆ ಮಹಿಳಾ ವಿಮೋಚನಾ ಚಲುವಳಿಯಲ್ಲಿ ಭಾಗವಹಿಸುವ ಮಹಿಳೆಯರು ಅವರ ವರ್ಗದ ಪುರುಷರ ವಿರುದ್ಧವೇ ಹೋರಾಟ ನಡೆಸಬೇಕಾಗುತ್ತದೆ. ಆದರೆ ಶ್ರಮಿಕ ಮಹಿಳೆ ಬಂಡವಾಳಶಾಹಿ ಸಮಾಜದ ವಿರುದ್ಧ ಹೋರಾಡುವಾಗ ತನ್ನ ವರ್ಗದ ಪುರುಷರನೆರವೂ ಪಡೆಯುತ್ತಾಳೆ. ಅವಳ ಹೋರಾಟದ ಅಂತಿಮಗುರಿ ಪುರುಷರ ವಿರುದ್ಧದ ಸ್ಪರ್ಧೆಯಲ್ಲ, ಆದರೆ ದುಡಿಯುವ ಜನರೇ ಆಳುವ ಸರ್ಕಾರವನ್ನು ನಡೆಸುವಂತಹ ಸ್ಥಿತಿಯ ನಿರ್ಮಾಣ. ಬಂಡವಾಳಶಾಹಿ ಶೋಷಣೆಯು ಕೊನೆಗೊಂಡಾಗ ಮಾತ್ರ ಮಹಿಳಾ ವಿಮೋಚನೆಯು ವಾಸ್ತವಾಗಬಲ್ಲದು'' ಎಂದು ಭಾಷಣ ಮಾಡಿದಳು.

ಕ್ಲಾರಾ ಜೆಟ್‌ಕಿನ್ ತನ್ನ ಪತ್ರಿಕೆ **'ದುಡಿಯುವ ಮಹಿಳೆಯರಿಗಾಗಿ** ಮೂಲಕ ಜರ್ಮನಿಯ ದುಡಿಯುವ ಮಹಿಳೆಯರು ಕ್ರಾಂತಿಕಾರಿ ಸಮಾಜವಾದಿ ಚಳುವಳಿಗಾಗಿ ದುಡಿಯುವಂತೆ ಉತ್ತೇಜಿಸಿದಳು, ಈ ಪತ್ರಿಕೆಯಾದರೋ ಶ್ರಮಿಕ ಮಹಿಳೆಯರಲ್ಲೂ ಅತ್ಯಂತ ಪ್ರಗತಿಪರರೂ, ಬುದ್ಧಿಜೀವಿಗಳು, ಎನಿಸಿಕೊಂಡವರನ್ನು ಮಾತ್ರ ತಲುಪುತ್ತಿತ್ತು. ಆ ಮಹಿಳೆಯರಿಗೆ ಪ್ರಖರ ವರ್ಗ ಪ್ರಜ್ಞೆಯನ್ನು ಬೆಳೆಸುವ ಉದ್ದೇಶ ಹೊಂದಿತ್ತು. ಇದು ಬಹುಸಂಖ್ಯಾತ ಮಹಿಳೆಯರು ಓದುವ ಪತ್ರಿಕೆಯಾಗಿರದೆ, ಕೆಲವೇ ಕೆಲವು ಅಲ್ಪಸಂಖ್ಯಾತ ಸಮಾಜವಾದಿ ಮಹಿಳೆಯರ ಚಟುವಟುವಟಿಕೆಗಳಿಗೆ ಮೀಸಲಾದ ಪತ್ರಿಕೆಯಾಯಿತು. ಜರ್ಮನಿಯಲ್ಲಿನ ದುಡಿಯುವ ಮಹಿಳೆಯರ ಸ್ಥಿತಿಗತಿ,

ಕಾರ್ಖಾನೆಯ ಕಾನೂನು ವಿವರ, ಮುಂತಾದ ಮಾಹಿತಿಗಳನ್ನು ಕುರಿತ ವಿವರಗಳನ್ನು ಚರ್ಚಿಸುತ್ತಿತ್ತು. ಅಷ್ಟೇ ಅಲ್ಲದೆ, ಮಕ್ಕಳನ್ನು ತರಬೇತುಮಾಡುವಲ್ಲಿ ಓದುಗರಿಗೆ ಕೆಲವು ಸಲಹೆಗಳನ್ನು ಕೊಡಲಾಗುತ್ತಿತ್ತು. ಹೆಣ್ಣುಮಕ್ಕಳನ್ನು ಸಾಂಪ್ರದಾಯಿಕ ಮಾದರಿಗಳಿಗಿಂತ ಭಿನ್ನವಾಗಿ ಮತ್ತು ಗಂಡು ಮಕ್ಕಳು ಗೃಹಕೃತ್ಯದಲ್ಲಿ ಭಾಗಿಯಾಗಲು ನೆರವಾಗುವಂತೆ ಬೆಳೆಸಬೇಕೆಂದು ಹೆತ್ತವರಿಗೆ ಸಲಹೆ, ಸೂಚನೆಗಳು ಈ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದವು. ಕ್ಲಾರಾಳ ಇಂತಹ ವಿಚಾರಗಳಿಗೆ ಬೆಂಬಲ ಸಿಕ್ಕುತ್ತಿದ್ದುದು ಬಹಳ ಕಡಿಮೆ ಸಂಖ್ಯೆಯಲ್ಲಿ.

ಆರಂಭದ ಹಂತದಲ್ಲಿ ಕ್ಲಾರಾ ಸಂಪಾದಿಸುತ್ತಿದ್ದ ಪತ್ರಿಕೆಯ ಪ್ರಸಾರ ಸೀಮಿತವಾಗಿತ್ತು. 1891ರಲ್ಲಿ 2000 ಇದ್ದದ್ದು 1903-4ರಲ್ಲಿ 11,000ಏರಿತು. 1904ರ ನಂತರ ಈ ಪತ್ರಿಕೆಯನ್ನು ಸೋಷಿಯಲಿಸ್ಟ್ ಡೆಮಾಕ್ರಟಿಕ್ ಪಕ್ಷದ ಎಲ್ಲ ಮಹಿಳೆಯರಿಗೂ ಮತ್ತು ಪಕ್ಷದ ಸದಸ್ಯರ ಮಡದಿಯರಿಗೂ ಉಚಿತವಾಗಿ ಹಂಚಲಾಗುತ್ತಿತ್ತು. ಹೀಗಾದಾಗ ಪತ್ರಿಕೆಯ ಪ್ರಸಾರ ಸಂಖ್ಯೆ 75,000ಕ್ಕೇರಿತು. 1914ರಲ್ಲಿ ಇದು 1,25,000 ಓದುಗರನ್ನು ತಲುಪುತ್ತಿತ್ತು. 1905ರಲ್ಲಿ ಪಕ್ಷದ ನಾಯಕತ್ವವು ಪತ್ರಿಕೆಯ ಸ್ವರೂಪದಲ್ಲಿ ಹಲವಾರು ಬದಲಾವಣೆಗಳನ್ನು ತರಲು ಕ್ಲಾರಾಳನ್ನು ಒತ್ತಾಯಿಸಿತು. ಆದರಿಂದ ಮಹಿಳೆಯರಿಗೆ, ಮಕ್ಕಳಿಗೆ ವಿಶೇಷ ಪುರವಣಿಗಳನ್ನು ಹೊರಡಿಸಲಾಯಿತು. ಪತ್ರಿಕೆಯು ಹೆಚ್ಚು ಹೆಚ್ಚು ಓದುಗರನ್ನು ಆಕರ್ಷಿಸಲು ಇದರಿಂದ ಸಾಧ್ಯವಾಯಿತು. 1908ರಿಂದ ಮಹಿಳೆಯರಿಗೆ, ರಾಜಕೀಯ ಪಕ್ಷಗಳಿಗೆ ಸದಸ್ಯತ್ವ ನೀಡಲು ಉದಾರವಾದ ನೀತಿ ತಳೆದದ್ದೇ ಕಾರಣವಾಗಿ ಪತ್ರಿಕೆಯ ಸ್ವರೂಪ ಮತ್ತು ವಸ್ತುವಿನಲ್ಲೂ ಹಲವಾರು ಭಾರಿ ಬದಲಾವಣೆಗಳನ್ನು ತರಬೇಕೆಂಬ ಒತ್ತಡ ಬೆಳೆಯಿತು. ಈ ಎಲ್ಲ ಬದಲಾವಣೆಗಳಿಂದ ಪತ್ರಿಕೆಯ ಮೇಲೆ ಕ್ಲಾರಾಳಿಗೆ ನಿಯಂತ್ರಣ ಸಡಿಲವಾಯಿತು. ಈ ಎಲ್ಲ ಬದಲಾವಣೆಯ ನಂತರ ಎರಡೇ ವರ್ಷಗಳ ಅವಧಿಯಲ್ಲಿ ಪತ್ರಿಕೆಯಲ್ಲಿ ಫ್ಯಾಷನ್ ಡಿಸೈನ್‌ಗಳು, ಅಡುಗೆ-ಅಲಂಕಾರದ ಮಾಹಿತಿಗಳು ಕಾಣಿಸಿಕೊಳ್ಳತೊಡಗಿದವು. ಸೋಷಿಯಲ್ ಡೆಮಾಕ್ರಟಿಕ್ ಪಕ್ಷವು ಕ್ಲಾರಾ ಜೆಟ್‌ಕಿನ್‌ಳನ್ನು ಸಮಾಜವಾದಿ ಮಹಿಳಾ ಚಳುವಳಿಯ ನೇತೃತ್ವದಿಂದ ತೆಗೆದು ಹಾಕಿ ಅವಳ ಜಾಗದಲ್ಲಿ ಉದಾರವಾದಿ ನಿಲುವಿನ ಲೂಯಿಸ್ ಜೇಯ್‌ಟ್ಜಳನ್ನು ಆಯ್ಕೆ ಮಾಡಿತು.

ಜರ್ಮನ್ ಸೋಷಿಯಲ್ ಡೆಮಾಕ್ರಟಿಕ್ ಪಕ್ಷದ ನೇತಾರರಲ್ಲಿ ಒಬ್ಬ ಪ್ರಮುಖ ವ್ಯಕ್ತಿಯಾಗಿ ಕ್ಲಾರಾ ಜೆಟ್‌ಕಿನ್ ಸತತವಾಗಿ ಉದಾರವಾದಿ ಕ್ರಾಂತಿಯ ನಿಲುವಿನ ವಿರುದ್ಧ ಹೋರಾಟ ನಡೆಸಿದಳು. ಮತ್ತೊಬ್ಬ ಆ ಕಾಲದ ಕ್ರಾಂತಿಕಾರಿನಾಯಕಿ ರೋಸಾ ಲಗ್ಸೆಂಬರ್ಗ್‌ಳ ಜೊತೆ ಸೇರಿ ದುಡಿಯುವ ವರ್ಗದ ಹಿತಕ್ಕಾಗಿ ಕ್ಲಾರಾ ಹಲವಾರು ಹೋರಾಟಗಳನ್ನು ಕೈಗೊಂಡಳು. 1905ರಿಂದ 1907ರವರೆಗೆ ನಡೆದ ರಷ್ಯಾದ ಕ್ರಾಂತಿಯ ನಂತರ ಆ ಹೋರಾಟದ ಅನುಭವಗಳಿಂದ ಜರ್ಮನ್ ಸೋಷಿಯಲಿಸ್ಟ್ ಪಕ್ಷ ಕಲಿಯಬೇಕಾದ ಪಾಠ ಬಹಳಷ್ಟಿದೆಯೆಂದು ಮನಗಂಡಳು. ತನ್ನ ಪತ್ರಿಕೆಯಲ್ಲಿ ಬರೆಯುತ್ತಾ, 'ರಷ್ಯಾದ ದುಡಿಯುವ ಜನತೆ ಇಡೀ ಯುರೋಪಿನ, ಅಷ್ಟೇ ಅಲ್ಲ ವಿಶ್ವದ ಕಾರ್ಮಿಕ ಚಳುವಳಿಗೆ ಮುಂಚೂಣಿಯಾಗಿದೆ' ಎಂದಳು. ರಷ್ಯಾದಲ್ಲಿ ನಡೆಯುತ್ತಿದ್ದ ಬೆಳವಣಿಗೆಯ ವಿವರಗಳನ್ನು ವಿಶದವಾಗಿ ವಿವರಿಸುತ್ತಾ ಹೋರಾಟದ ಹೊಸಮಾದರಿಗಳು ಹೇಗೆ ಕ್ರಾಂತಿಯ ಸಂದರ್ಭದಲ್ಲಿ ಹುಟ್ಟಿಕೊಳ್ಳುತ್ತವೆ, ಎಂಬುದನ್ನು ವಿವರಿಸಿದಳು. ರೋಸಾ ಲಕ್ಸೆಂಬರ್ಗ್ ಮತ್ತು ಕ್ಲಾರಾ ಜೆಟ್‌ಕಿನ್ ಇಬ್ಬರೂ ಕ್ರಾಂತಿಕಾರಿ ಹೋರಾಟದಲ್ಲಿ ಸಾಮೂಹಿಕ ಮುಷ್ಕರಗಳ ಪಾತ್ರವನ್ನು ಒತ್ತಿ ಹೇಳಿದರು.

ಕ್ಲಾರಾ ಜೆಟ್‌ಕಿನ್ ಅಂತರರಾಷ್ಟ್ರೀಯ ಮಹಿಳಾ ಚಳುವಳಿಯಲ್ಲಿ ಮುಖ್ಯ ಪಾತ್ರ ವಹಿಸಿದಳು. 1900ರಿಂದ ಜರ್ಮನಿಯ ಸೋಷಿಯಲಿಸ್ಟ್ ಡೆಮಾಕ್ರಟಿಕ್ ಪಕ್ಷದ ನೇತೃತ್ವದಲ್ಲಿ ಎರಡು ವರ್ಷಗಳಿಗೊಮ್ಮೆ ತಪ್ಪದೆ ಅಂತರ ರಾಷ್ಟ್ರೀಯ ಸಮಾವೇಶವನ್ನು ನಡೆಸುತ್ತಿದ್ದಳು. ಜೇಟಾಕಿನ್‌ಳ ಸತತ ಪರಿಶ್ರಮ ಮತ್ತು ಪ್ರಯತ್ನದಿಂದಾಗಿ ಮೊದಲ ಅಂತರರಾಷ್ಟ್ರೀಯ ಮಹಿಳಾ ಸಮಾವೇಶವು 1907ರಲ್ಲಿ ನಡೆಯಿತು. ಸ್ಟಟ್‌ಗಾರ್ಟ್‌ನಲ್ಲಿ ನಡೆದ ಈ ಸಮಾವೇಶದಲ್ಲಿ ಹದಿನೈದು ರಾಷ್ಟ್ರಗಳ ಪ್ರತಿನಿಧಿಗಳಾಗಿ 59 ಮಹಿಳಾ ಪ್ರತಿನಿಧಿಗಳು ಭಾಗವಹಿಸಿದ್ದರು. ಈ ಸಮಾವೇಶದಲ್ಲಿ ಸಾರ್ವತ್ರಿಕ ಮತದಾನವನ್ನು ಕುರಿತಂತೆ ಮತ್ತು ಸ್ತ್ರೀವಾದದ ಸ್ವರೂಪದ ಬಗ್ಗೆ ಚರ್ಚೆಗಳು ನಡೆದು ತೀವ್ರವಾದ ಭಿನ್ನಾಭಿಪ್ರಾಯಗಳು ಪ್ರಕಟವಾದವು. ಫ್ರಾನ್ಸ್, ಆಸ್ಟ್ರಿಯಾ, ಬೆಲ್ಜಿಯಂ ಮತ್ತು ಬ್ರಿಟನ್‌ನ ಪ್ರತಿನಿಧಿಗಳು ಸೀಮಿತವಾದ ಮತದಾನದ ಹಕ್ಕಿಗಾಗಿ ಹೋರಾಡಬೇಕೆಂದು ವಾದಿಸಿದವು. ಆಸ್ತಿಯ ವಿವರ ಮತ್ತು ಸಂಪಾದನೆಯ ಅರ್ಹತೆಯ ಮೇಲೆ ಮತದಾನದ ಹಕ್ಕಿರಬೇಕೆಂದು ಈ ಪ್ರತಿನಿಧಿಗಳು ವಾದಿಸಿದರು. ಬ್ರಿಟನ್ ಮತ್ತು ಫ್ರಾನ್ಸಿನ ಪ್ರತಿನಿಧಿಗಳು ಕ್ಲಾರಾ ಜೆಟ್‌ಕಿನ್ ಮತ್ತು ಅವಳ ಬೆಂಬಲಿಗರು ಸ್ತ್ರೀವಾದಿ ಚಳುವಳಿಯನ್ನು ತುಂಬ ಸೀಮಿತ ಚೌಕಟ್ಟಿನಲ್ಲಿ ವಿಶ್ಲೇಷಿಸುತ್ತಾರೆಂಬ ಆರೋಪಕ್ಕೆ ಒಳಗಾದರು. ಕ್ಲಾರಾ ಜೆಟ್‌ಕಿನ್‌ಳ ಮಾರ್ಕ್ಸ್‌ವಾದಿ ವಿಚಾರಗಳನ್ನು ಬೆಂಬಲಿಸಿದ ಅಲೆಕ್ಸಾಂಡ್ರ ಕೊಲಂತೈ ಮತ್ತು ಜರ್ಮನ್ ಪ್ರತಿನಿಧಿಗಳ ಒತ್ತಾಯದ ಪರಿಣಾಮವಾಗಿ ಮಂಡಿಸಿದ ಸಮಾವೇಶದ ನಿರ್ಣಯಗಳು ಬಹು ಮತ ಪಡೆದವು. ಆ ನಿರ್ಣಯಗಳೆಂದರೆ ''ಜಗತ್ತಿನ ಎಲ್ಲ ಸಮಾಜವಾದಿ ಪಕ್ಷಗಳ ಮಹಿಳಾ ಮತದಾನದ

ಹಕ್ಕಿಗಾಗಿ ಹೋರಾಟ ಮಾಡಬೇಕಾದದ್ದು ಅವರ ಆದ್ಯ ಕರ್ತವ್ಯವಾಗಿದೆ ಮತ್ತು ಸಮಾಜವಾದಿ ಮಹಿಳಾ ಹೋರಾಟವು ಬೂರ್ಷ್ವಾ ಮಹಿಳಾ ಹೋರಾಟದ ಸೆಳೆತಕ್ಕೆ ಸಿಲುಕಿಕೊಳ್ಳದೆ ಜೊತೆ ಜೊತೆಯಲ್ಲಿಯೇ ಹೋರಾಟ ನಡೆಸಬೇಕು.''

ಈ ಸಮಾವೇಶವಾದ ನಂತರ ಮೂರು ವರ್ಷಗಳಾದ ಮೇಲೆ ಕೋಪೆನ್‌ಹೆಗೆನ್‌ನಲ್ಲಿ ಎರಡನೇ ಅಂತರರಾಷ್ಟ್ರೀಯ ಸಮಾವೇಶ ನಡೆದಾಗ ಅಲ್ಲಿ ಎರಡು ನಿರ್ಣಯಗಳನ್ನು ಕ್ಲಾರಾ ಜೆಟ್‌ಕಿನ್ ಮಂಡಿಸಿದಳು. ಒಂದು ಸಾರ್ವತ್ರಿಕ ಮತದಾನದ ಬೇಡಿಕೆ, ಮತ್ತೊಂದು ಮಾರ್ಚ್ 8ನ್ನು ಅಂತರರಾಷ್ಟ್ರೀಯ ಮಹಿಳಾದಿನವನ್ನಾಗಿ ಆಚರಿಸಬೇಕೆಂಬ ಘೋಷಣೆ. ಈ ರೀತಿ 1908ರಂದು ನ್ಯೂಯಾರ್ಕಿನ ಸಮಾಜವಾದಿ ಮಹಿಳೆಯರು ಬೂರ್ಷ್ವಾಶೋಷಣೆಯ ವಿರುದ್ಧ ನಡೆಸಿದ ಪ್ರತಿಭಟನಾ ಮೆರವಣಿಗೆಯನ್ನು ಗೌರವಿಸಲಾಯಿತು. ಜಗತ್ತಿನಲ್ಲೆಲ್ಲಾ ಇರುವ ದುಡಿಯುವ ಮಹಿಳೆಯರು ಮಾರ್ಚ್ 8ನ್ನು ದುಡಿಯುವ ಮಹಿಳೆಯರ ದಿನವನ್ನಾಗಿ ಆಚರಿಸಿದರು. 1911ರ ಮಾರ್ಚ್‌ನಲ್ಲಿಯೇ ಜರ್ಮನಿ, ಆಸ್ಟ್ರಿಯಾ, ಸ್ವಿಟ್ಜರ್‌ಲ್ಯಾಂಡ್ ಮತ್ತು ಡೆನ್‌ಮಾಕಿರನ ಮಹಿಳೆಯರು ಮತ್ತು ಪುರುಷರು ಬೃಹತ್ ಸಂಖ್ಯೆಯಲ್ಲಿ ಬೀದಿಗಿಳಿದು ಮಹಿಳಾ ದಿನವನ್ನು ಆಚರಿಸಿದರು.

ಇದರ ಜೊತೆ ಜೊತೆಯಲ್ಲಿಯೇ ಜೆಟ್‌ಕಿನ್ ಉಳಿದ ಸಮಾಜವಾದಿ ಮಹಿಳೆಯರೊಂದಿಗೆ ಮಿಲಿಟರೀಕರಣ, ಸಾಮ್ರಾಜ್ಯಶಾಹಿ ಮತ್ತು ಬಂಡವಾಳಶಾಹಿ ಶಕ್ತಿಗಳ ವಿರುದ್ಧ ಪ್ರಚಾರ ಮಾಡಿದಳು. 1912ರಲ್ಲಿ ಬಾಸ್ಲೆಯಲ್ಲಿ ನಡೆದ ಎರಡನೇ ಅಂತರ್ರಾಷ್ಟ್ರೀಯ ಸಮಾವೇಶದಲ್ಲಿ ಕಾರ್ಮಿಕರ ಚಳುವಳಿಯು ಸಾಮ್ರಾಜ್ಯಶಾಹಿಗಳ ವಿರುದ್ಧ ಹೋರಾಡಬೇಕೆಂದು ಒತ್ತಿ ಹೇಳಿದಳು. ರೋಸಾ ಲಗ್ಸೆಂಬರ್ಗ್ ಮತ್ತು ಕ್ಲಾರಾ ಜೆಟ್‌ಕಿನ್ ಅಂತರ್ರಾಷ್ಟ್ರೀಯ ಮಹಿಳಾ ಸಮಾವೇಶಗಳನ್ನು ಬರ್ನ್, ಸ್ವಿಟ್ಜರ್‌ಲ್ಯಾಂಡ್‌ಗಳಲ್ಲಿ ವ್ಯವಸ್ಥೆ ಗೊಳಿಸಿ ಯುದ್ಧವನ್ನು ವಿರೋಧಿಸಬೇಕಾದ ಅಗತ್ಯವನ್ನು ಒತ್ತಿ ಹೇಳಿದರು. ಕ್ಲಾರಾ ಜೆಟ್‌ಕಿನ್‌ಳ ರಾಜಕೀಯ ಚಟುವಟಿಕೆ ಸರ್ಕಾರದ ಕಣ್ಣನ್ನು ಕೆಂಪಾಗಿಸಿತು. 'ರಾಜದ್ರೋಹ'ದ ಆರೋಪದ ಮೇಲೆ ಅವಳನ್ನು ಕೈಸರ್ ಸರ್ಕಾರ ಬಂಧಿಸಿತು. ಸೋಷಿಯಲಿಸ್ಟ್ ಪಕ್ಷದ ಪತ್ರಿಕೆಯ ಸಂಪಾದಕತ್ವದಿಂದ ಅವಳನ್ನು ತೆಗೆದುಹಾಕಲಾಯಿತು. ಕ್ಲಾರಾ ಜೈಲಿನಿಂದ ಬಿಡುಗಡೆಯಾದ ನಂತರ Leipziger Volkszeitung ಪತ್ರಿಕೆಯ ಮಹಿಳಾ ಪುರವಣಿಯನ್ನು ಸಂಪಾದಿಸಿದಳು. ರೋಸಾ ಲಗ್ಸೆಂಬರ್ಗ್, ಫ್ರಾಂಜ್ ಮೆಹರಿಂಗ್ ಮುಂತಾದವರೊಡಗೂಡಿ 'ಅಂತರರಾಷ್ಟ್ರೀಯ ಸ್ಪಾರ್ಟಕಸ್ ಲೀಗ್' ಸ್ಥಾಪಕ ಸದಸ್ಯೆಯಾದಳು. ಯುದ್ಧ ಮುಗಿದ ನಂತರ ಕ್ರಾಂತಿಕಾರಿ ಮಾರ್ಕ್ಸ್‌ವಾದಿಗಳೊಂದಿಗೆ ಸೇರಿ ಅವಳು ಸ್ವತಂತ್ರ ಸೋಷಿಯಲ್ ಡೆಮಾಕ್ರಟಿಕ್ ಪಕ್ಷವನ್ನು ಸೇರಿದಳು. ಅಲ್ಲಿಂದ ಕೊನೆಗೆ ಜರ್ಮನಿಯ ಕಮ್ಯೂನಿಸ್ಟ್ ಪಕ್ಷವನ್ನು ಸೇರಿದಳು ಮತ್ತು ಅದರ ಕೇಂದ್ರ ಸಮಿತಿಯ ಸದಸ್ಯೆಯಾದಳು.

ಸೋಷಿಯಲ್ ಡೆಮಾಕ್ರಟಿಕ್ ಪಕ್ಷದ ಆಶಯದಂತೆ ಕ್ಲಾರಾಜೆಟ್‌ಕಿನ್ ಅತ್ಯುತ್ಸಾಹದಿಂದ ರಷ್ಯನ್ ಕ್ರಾಂತಿಯನ್ನು ಸ್ವಾಗತಿಸಿದಳು. ಹೊಸ ಕಾರ್ಮಿಕರ ಸರ್ಕಾರದೊಂದಿಗೆ ಸೌಹಾರ್ದತಾ ಹಸ್ತವನ್ನು ಚಾಚಿದಳು. ನಂತರ ಕಮ್ಯೂನಿಸ್ಟ್ ಇಂಟರ್‌ನ್ಯಾಷನಲ್‌ನ ಚಟುಚಟಿಕೆಗಳಲ್ಲಿ ಕ್ರಿಯಾಶೀಲವಾಗಿ ಭಾಗವಹಿಸಿದಳು. 1920ರಲ್ಲಿ ಅದರ ಕಾರ್ಯಕಾರಿ ಸಮಿತಿ ಮತ್ತು ಪ್ರೆಸೀಡಿಯಂನ ಸದಸ್ಯೆಯಾದಳು.

ಕ್ಲಾರಾ ಜೆಟ್‌ಕಿನ್ ಮಾಡಿದ ಕೊನೆಯ ಮುಖ್ಯವಾದ ಭಾಷಣವೆಂದರೆ ಆಮ್‌ಸ್ಟ್ರಾಡ್ಯಾಮ್‌ನಲ್ಲಿ 1932ರಲ್ಲಿ ನಡೆದ ಯುದ್ಧ ವಿರೋಧಿ ಕಾಂಗ್ರೆಸ್‌ನಲ್ಲಿ ಮಾಡಿದ್ದು. 1920ರ ನಂತರ ಜರ್ಮನ್ ಪಾರ್ಲಿಮೆಂಟಿಗೆ ಕ್ಲಾರಾ ಚುನಾಯಿತಳಾದಾಗ ಅವಳೇ ಅತ್ಯಂತ ಹಿರಿಯ ಡೆಪ್ಯುಟಿಯಾಗಿದ್ದಳು. ಮಾಸ್ಕೋದಿಂದ ಬರ್ಲಿನ್‌ವರೆಗೂ ಸಂಚರಿಸಿ ಯುದ್ಧ ವಿರೋಧಿ ಸಮಾವೇಶವನ್ನು ಉದ್ಘಾಟಿಸಲು ಹೋಗಿದ್ದಳು. ಫ್ಯಾಸಿಸ್ಟ್ ಪ್ರೆಸ್ ಅವಳು ಸಮಾರಂಭಕ್ಕೆ ಬರಕೂಡದೆಂದು ಎಚ್ಚರಿಸಿತು. ಆದರೂ ಕ್ಲಾರಾ ಜೆಟ್‌ಕಿನ್ ತನ್ನ ಉದ್ಘಾಟನಾಭಾಷಣದಲ್ಲಿ ಫ್ಯಾಸಿಸ್ಟ್ ಶಕ್ತಿಗಳನ್ನು ವಿರೋಧಿಸಿ ಕ್ರಾಂತಿಕಾರಿ ಭಾಷಣವನ್ನು ಮಾಡಿದಳು. ಎಲ್ಲ ಸಮಾಜವಾದಿ ಶಕ್ತಿಗಳು ಒಟ್ಟಾಗಿಯೇ ಸೇರಿ ಐಕ್ಯ ವೇದಿಕೆಯನ್ನು ರಚಿಸಬೇಕೆಂದು ಕರೆಯಿತ್ತಳು. ಫ್ಯಾಸಿಸಂನ ವಿರುದ್ಧದ ಹೋರಾಟವೆಂದರೆ ಜರ್ಮನಿಯಲ್ಲಿ ಆಳವಾಗಿ ಬೇರೂರಿರುವ ಬೂರ್ಷ್ವಾ ಮೌಲ್ಯಗಳ ವಿರುದ್ಧ ಪ್ರಜಾಪ್ರಭುತ್ವವನ್ನು ಎತ್ತಿ ಹಿಡಿಯುವುದು ಎಂದಳು.

ಹಿಟ್ಲರ್ ಅಧಿಕಾರಕ್ಕೆ ಬಂದ ಕೆಲವೇ ತಿಂಗಳುಗಳ ನಂತರ 1933ರಲ್ಲಿ ಜೂನ್ 20ರಂದು ಮಾಸ್ಕೋದ ಹತ್ತಿರವಿರುವ ಅರ್ಕಂಜೆಲ್ಸ್ಕೋದಲ್ಲಿ ಕ್ಲಾರಾ ತನ್ನ ಕೊನೆಯುಸಿರೆಳೆದಳು. ಆರು ಲಕ್ಷಕ್ಕೂ ಹೆಚ್ಚು ದುಡಿಯುವ ಜನರು ಅವಳ ಅಂತಿಮಯಾತ್ರೆಯಲ್ಲಿ ಭಾಗವಹಿಸಿದರು. ಕ್ರಾಂತಿಲೋಕದ ದಿಗ್ಗಜರಾದ ಸ್ಟಾಲಿನ್, ಮೊಲೋಟೋವ್, ಕಾಲಿನಿನ್ ಮುಂತಾದವರು ಮತ್ತು ಕಮ್ಯೂನಿಸ್ಟ್ ಇಂಟರ್‌ನ್ಯಾಷನಲ್‌ನ ಪ್ರೆಸಿಡಿಯಂನ ಸದಸ್ಯರು ಮಾಸ್ಕೋದಲ್ಲಿ ನಡೆದ ಅಂತಿಮಸಂಸ್ಕಾರದಲ್ಲಿ ಭಾಗವಹಿಸಿದ್ದರು. ಕ್ಲಾರಾಳ ನಂತರ ಅವಳ ದೇಹದ ಬೂದಿಯನ್ನು ಕ್ರೆಮ್ಲಿನ್‌ನ ಕೆಂಪುಗೋಡೆಯ ಬಳಿ ಲೆನಿನ್‌ನ ಸಮಾಧಿಯ ಪಕ್ಕ ಇರಿಸಲಾಗಿದೆ.

★★★

# ''ನಾಪತ್ತೆಯಾದ'' ಸ್ತ್ರೀಯರ ರಹಸ್ಯ

**ಪ್ರೊ ॥ ಬಿ.ಐ. ವೀರಭದ್ರಪ್ಪ**

ಜನಗಣತಿಯಲ್ಲಿ ಸ್ತ್ರೀ ಪುರುಷರ ಸಂಖ್ಯೆ ಸರಿಸಮಾನವಾಗಿರುತ್ತದೆ ಎಂಬುದು ಸಾಮಾನ್ಯ ನಂಬಿಕೆ. ಅಮೆರಿಕಾ ಮತ್ತು ಯೂರೋಪ್‌ಗಳಂತಹ ಮುಂದುವರಿದ ದೇಶಗಳಲ್ಲಿ ಪುರುಷರಿಗಿಂತ ಸ್ತ್ರೀಯರ ಪ್ರಮಾಣ ಅಧಿಕವಾಗಿದ್ದರೆ, ಭಾರತ, ಪಾಕಿಸ್ತಾನ ಮತ್ತು ಬಾಂಗ್ಲಾದೇಶಗಳಂತಹ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಸ್ತ್ರೀಯರ ಸಂಖ್ಯೆ ಪುರುಷರದಕ್ಕಿಂತ ಕಡಿಮೆ ಇದೆ!

ಪ್ರತಿ 1000 ಪುರುಷರಿಗೆ ಇರುವ ಸ್ತ್ರೀಯರ ಸಂಖ್ಯೆಯನ್ನು 'ಲಿಂಗ ಪ್ರಮಾಣ' ಎಂದು ಪಾರಿಭಾಷಿಕವಾಗಿ ಗುರುತಿಸಲಾಗುತ್ತಿದೆ. ಪ್ರಪಂಚದ ವಿವಿಧ ದೇಶಗಳಲ್ಲಿ ಮತ್ತು ಒಂದೇ ದೇಶದ ಬೇರೆ ಬೇರೆ ಪ್ರದೇಶಗಳಲ್ಲಿ 'ಲಿಂಗ ಪ್ರಮಾಣ' ಹೆಚ್ಚು ಕಡಿಮೆ ಇರುವುದು ಕಂಡುಬರುತ್ತದೆ. ಜೀವಶಾಸ್ತ್ರದ ಪ್ರಕಾರ ಪ್ರತಿ 100 ಹೆಣ್ಣುಮಕ್ಕಳಿಗೆ 105 ಅಥವಾ 106 ಗಂಡು ಮಕ್ಕಳು ಜನಿಸುತ್ತಿದ್ದಾರೆ. ಜನನಕ್ಕೆ ಸಂಬಂಧಿಸಿದ ಮಟ್ಟಿಗೆ ಈ ಪ್ರಮಾಣ ಎಲ್ಲ ದೇಶಗಳಲ್ಲೂ ಕಂಡುಬರುತ್ತದೆ. ಆದರೆ ಈ ಮಕ್ಕಳು ಬೆಳೆದು ದೊಡ್ಡವರಾಗುವ ವೇಳೆಗೆ ಮೇಲಿನ ಪ್ರಮಾಣ ಕೆಲವು ದೇಶಗಳಲ್ಲಿ ತಲೆಕೆಳಗಾಗುತ್ತದೆ. ಯೂರೋಪು ಮತ್ತು ಉತ್ತರ ಅಮೆರಿಕಗಳಲ್ಲಿ ಪ್ರತಿ 100 ಪುರುಷರಿಗೆ 105 ಸ್ತ್ರೀಯರು ಇದ್ದಾರೆ. ಆಗ್ನೇಯ ಏಶಿಯಾದಲ್ಲಿ, ಚೀನಾ ಬಿಟ್ಟು ಉಳಿದ ಪೂರ್ವ ಏಶಿಯಾ ಪ್ರದೇಶಗಳಲ್ಲೂ ಸಹ ಸ್ತ್ರೀಯರ ಸಂಖ್ಯೆ ಪುರುಷರ ಸಂಖ್ಯೆಗಿಂತ ಅಧಿಕವಾಗಿಯೇ ಇದೆ. ಈ ಪ್ರದೇಶಗಳಲ್ಲಿ ಪ್ರತಿ 100 ಪುರುಷರಿಗೆ 101ರವರೆಗೆ ಸ್ತ್ರೀಯರಿದ್ದಾರೆ. ದಕ್ಷಿಣ ಏಶಿಯಾದ ಪಾಕಿಸ್ತಾನ, ಭಾರತ ಮತ್ತು ಬಾಂಗ್ಲಾದೇಶದಲ್ಲಿ ಪ್ರತಿ 100 ಪುರುಷರಿಗೆ 90ರಿಂದ 94ರವರೆಗೆ ಮಾತ್ರ ಸ್ತ್ರೀಯರ ಸಂಖ್ಯೆ ಇದೆ. ಭಾರತ ದೇಶದಲ್ಲಿ 1991ರ ಜನಗಣತಿ ಪ್ರಕಾರ ಪ್ರತಿ 100 ಪುರುಷರಿಗೆ 93 ಸ್ತ್ರೀಯರಿದ್ದಾರೆ. ದೇಶದೊಳಗಿನ ಬೇರೆ ಬೇರೆ ರಾಜ್ಯಗಳಲ್ಲಿ 'ಲಿಂಗ ಪ್ರಮಾಣ'ದ ವ್ಯತ್ಯಾಸಗಳು ಇದಕ್ಕಿಂತಲೂ ಅಧಿಕವಾಗಿವೆ. ಪಂಜಾಬ್ ಮತ್ತು ಹರಿಯಾಣ ರಾಜ್ಯಗಳು ನಮ್ಮ ದೇಶದ ಸಂಪದ್ಭರಿತ ರಾಜ್ಯಗಳು. ಆದರೆ ಅಲ್ಲಿಯ ಸ್ತ್ರೀಯರ ಸಂಖ್ಯೆ ದೇಶದ ಸರಾಸರಿಗಿಂತ ಕಡಿಮೆ ಇದೆ, ಪ್ರತಿ 100 ಪುರುಷರಿಗೆ ಹರ್‍ಯಾಣದಲ್ಲಿ 87 ಮತ್ತು ಪಂಜಾಬ್‌ನಲ್ಲಿ 88 ಮಂದಿ ಮಾತ್ರ ಸ್ತ್ರೀಯರಿದ್ದಾರೆ. ಇವುಗಳಿಗಿಂತ ಬಡರಾಜ್ಯವಾದ ಕೇರಳದಲ್ಲಿ 100 ಪುರುಷರಿಗೆ 103ರವರೆಗೂ ಸ್ತ್ರೀಯರಿದ್ದಾರೆ. ಈ ಪ್ರಮಾಣ ಉತ್ತರ ಅಮೆರಿಕ ಮತ್ತು ಜಪಾನ್‌ಗಳ ಪ್ರಮಾಣಕ್ಕೆ ಸಮೀಪವಾಗಿದೆ.

ವಿಶ್ವಸಂಸ್ಥೆ, ಅದರ ಅಂಗ ಸಂಸ್ಥೆಗಳು, ವಿಶ್ವಬ್ಯಾಂಕ್ ಮತ್ತು ಜನಗಣತಿ ಲೆಕ್ಕಗಳ ಆಧಾರದ ಮೇಲೆ ಸ್ತ್ರೀಯರ ಸಂಖ್ಯೆ ಇರಬೇಕಾದಕ್ಕಿಂತ ಎಷ್ಟು ಕಡಿಮೆ ಇದೆ ಮತ್ತು ಈ ರೀತಿ ಕಡಿಮೆ ಇರಲು ಇರಬಹುದಾದ ಕಾರಣವೇನು ಎಂದು ತಿಳಿಯಲು 1989ರಲ್ಲಿ ಪ್ರೊ॥ ಅಮರ್ತ್ಯ ಸೇನ್ ಅಧ್ಯಯನ ಮಾಡಿದರು ಪ್ರೊ॥ ಸೇನ್ ಅವರ ಅಂದಾಜಿನ ಪ್ರಕಾರ ಯೂರೋಪು ಮತ್ತು ಉತ್ತರ ಅಮೆರಿಕಗಳಲ್ಲಿ ಸ್ತ್ರೀಯರ ಸಂಖ್ಯೆ ಪುರುಷರ ಸಂಖ್ಯೆಗಿಂತ ಅಧಿಕವಾಗಿದೆ. ಸಬ್‌ಸಹರನ್ ಆಫ್ರಿಕ, ಆಗ್ನೇಶಿಯಾ, ಲ್ಯಾಟಿನ್ ಅಮೆರಿಕಗಳಲ್ಲಿ ಸ್ತ್ರೀ ಪುರುಷರ ಪ್ರಮಾಣ ಸಮಾನವಾಗಿದೆ. ವಿಶ್ವದ ಇತರ ಭಾಗಗಳಲ್ಲಿ ಪುರುಷರ ಸಂಖ್ಯೆಗಿಂತ ಸ್ತ್ರೀಯರ ಸಂಖ್ಯೆ ಕಡಿಮೆ ಇದೆ. ಒಂದು ದೇಶದಲ್ಲಿ ಅಥವಾ ಪ್ರದೇಶದಲ್ಲಿ ಪ್ರತಿ 100 ಪುರುಷರಿಗೆ 94 ಸ್ತ್ರೀಯರಿದ್ದಾರೆ ಎಂದರೆ ಪುರುಷರ ಪ್ರಮಾಣಕ್ಕಿಂತ ಸ್ತ್ರೀಯರ ಪ್ರಮಾಣ ಶೇ. 6 ಕಡಿಮೆ ಎಂದು ಗೊತ್ತಾಗುತ್ತದೆ. ಅಭಿವೃದ್ಧಿಹೊಂದಿದ ಉತ್ತರ ಅಮೆರಿಕ ಮತ್ತು ಯೂರೋಪ್ ದೇಶಗಳಲ್ಲಿಯಂತೆ ಎಲ್ಲ ದೇಶಗಳಲ್ಲೂ ಪ್ರತಿ 100 ಪುರುಷರಿಗೆ 105 ರಷ್ಟು ಸ್ತ್ರೀಯರು ಇರಬೇಕೆಂಬ ಲೆಕ್ಕದ ಮೇಲೆ ಅಂದಾಜು ಮಾಡಿದರೆ ಸ್ತ್ರೀಯರ ಪ್ರಮಾಣ ಇನ್ನೂ ಶೇ. 5ರಷ್ಟು ಕಡಿಮೆಯಾದಂತೆ ಕಂಡುಬರುತ್ತದೆ. ಈ ಸೂತ್ರದ ಪ್ರಕಾರ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಸ್ತ್ರೀಯರ ಪ್ರಮಾಣ ಪುರುಷರ ಪ್ರಮಾಣಕ್ಕಿಂತ ಶೇ. 11ರಷ್ಟು ಕಡಿಮೆ ಎಂದು ತಿಳಿಯಬೇಕಾಗುತ್ತದೆ. ಈ ಕ್ರಮದಲ್ಲಿ ಲೆಕ್ಕ ಹಾಕಿದರೆ ಚೀನಾ ದೇಶವೊಂದರಲ್ಲೇ ಐದು ಕೋಟಿ ಸ್ತ್ರೀಯರ ಸಂಖ್ಯೆ ಕಡಿಮೆಯಾದಂತೆ ಕಂಡುಬರುತ್ತದೆ. ದಕ್ಷಿಣ ಏಶಿಯಾ, ಪಶ್ಚಿಮ ಏಶಿಯಾ, ಉತ್ತರ ಆಫ್ರಿಕಾಗಳಲ್ಲಿ ಸಹ ಕಡಿಮೆಯಾದ ಸ್ತ್ರೀಯರ ಕಾಣದಿರುವುದು ನಮ್ಮ ಗಮನ ಸೆಳೆಯುತ್ತದೆ! ಕಣ್ಣಿಗೆ ಕಾಣದ ಈ ಸ್ತ್ರೀಯರನ್ನು ಪ್ರೊ॥ಸೇನ್ ''ನಾಪತ್ತೆಯಾದ'' (ಮಿಸ್ಸಿಂಗ್) ಸ್ತ್ರೀಯರೆಂದು ಕರೆಯುತ್ತಾರೆ. ಇವರೆಲ್ಲಾ ಎಲ್ಲಿ ಹೋದರು? ಅದರ ಹಿಂದಿನ ರಹಸ್ಯವೇನು?

ಪುರುಷರಿಗಿಂತ ಸ್ತ್ರೀಯರಿಗೆ ಕಷ್ಟಸಹಿಷ್ಣುತಾ ಶಕ್ತಿ ಅಧಿಕವಾಗಿರುತ್ತದೆ ಎಂದು ಜೀವಶಾಸ್ತ್ರ ಹೇಳುತ್ತದೆ. ಪುರುಷರಿಗೆ ಸಮಾನವಾದ ಪೋಷಣೆ, ಆರೋಗ್ಯ ರಕ್ಷಣೆ, ಇತರ ಜೀವನ ಸೌಲಭ್ಯಗಳು ಸ್ತ್ರೀಯರಿಗೆ ದೊರೆತರೆ ಅವರು ಹೆಚ್ಚು ಕಾಲ ಜೀವಿಸುವ ಅವಕಾಶವಿರುತ್ತದೆ. ಪುರುಷರಿಗಿಂತ ಇವರಿಗೆ ರೋಗ ನಿಗ್ರಹಶಕ್ತಿ ಹೆಚ್ಚು; ಒತ್ತಡಗಳಿಗೆ ತಟ್ಟುಕೊಳ್ಳುವ ಶಕ್ತಿಯು ಅಧಿಕವಾಗಿರುತ್ತದೆ. ಮಕ್ಕಳನ್ನು ಹೆರುವ ಕಾಲ ಮುಗಿದ ನಂತರ ಮಾತ್ರವಲ್ಲ, ತಾಯ ಗರ್ಭದಲ್ಲಿರುವಾಗಲೂ (ಭ್ರೂಣಾವಸ್ಥೆಯಲ್ಲೂ) ಇವರು ಗಂಡು ಮಕ್ಕಳಿಗಿಂತ ಗಟ್ಟಿ ಜೀವಿಗಳು. ಅಪ್ರಯತ್ನವಾಗಿ ಸಂಭವಿಸುವ ಗರ್ಭಸ್ರಾವಗಳಲ್ಲಿ ಹೆಚ್ಚು ಭಾಗ ಪುರುಷ ಭ್ರೂಣಗಳಿಗೆ ಸಂಭವಿಸಿದವಾಗಿರುತ್ತವೆ ಎಂದು ತಜ್ಞವೈದ್ಯರು ಅಭಿಪ್ರಾಯಪಡುತ್ತಾರೆ. ಪ್ರತಿ ನೂರು ಮಂದಿ ಹೆಣ್ಣು ಮಕ್ಕಳಿಗೆ ಸರಾಸರಿ 105-106 ಗಂಡು ಮಕ್ಕಳು ಹುಟ್ಟುತ್ತಾರೆ ಎಂದು ಜನಗಣತಿ ಲೆಕ್ಕಗಳು ತಿಳಿಸುತ್ತವೆ. ಆದರೂ ಕೆಲವು ದೇಶಗಳಲ್ಲಿ ಪುರುಷರ ಪ್ರಮಾಣಕ್ಕಿಂತ ಸ್ತ್ರೀಯರ ಪ್ರಮಾಣ ಅಧಿಕವಾಗಿರುವುದು ಅವರ ಜೀವಶಕ್ತಿಗೆ ನಿದರ್ಶನವಾಗಿದೆ.

ಇಷ್ಟು ಜೀವಧಾರಣ ಶಕ್ತಿಯನ್ನುಳ್ಳ ಸ್ತ್ರೀಯರು ಕೆಲವು ಭಾಗಗಳಲ್ಲಿ ಪುರುಷರಿಗಿಂತ ಕಡಿಮೆ ಸಂಖ್ಯೆಯಲ್ಲಿರಲು ಕಾರಣವೇನು? ಅವರ ಮರಣ ಪ್ರಮಾಣ ಪುರುಷರ ಪ್ರಮಾಣಕ್ಕಿಂತ ಹೆಚ್ಚಾಗಿರುವುದೇ ಇದಕ್ಕೆ ಕಾರಣವೆಂದು ಜನಗಣತಿ ಲೆಕ್ಕಗಳು ತೋರಿಸುತ್ತವೆ. ಜನಿಸಿದಾಗಿನಿಂದ ಮುಟ್ಟು ನಿಲ್ಲುವವರೆಗೆ, ಅದೇ ವಯಸ್ಸಿನ ಪುರುಷರ ಮರಣಕ್ಕಿಂತ ಸ್ತ್ರೀಯರ ಮರಣ ಪ್ರಮಾಣ ಅಧಿಕವಾಗಿರುತ್ತದೆ. ಪುರುಷರಿಗೆ ಸಮಾನವಾದ ಪೋಷಣೆ, ಆರೋಗ್ಯ ರಕ್ಷಣೆ ಮತ್ತು ಇತರ ಸೌಕರ್ಯಗಳು ಸ್ತ್ರೀಯರಿಗೆ ಲಭಿಸದೇಹೋಗುವುದರಿಂದ ಅವರು

ಅಕಾಲ ಮರಣಕ್ಕೀಡಾಗುತ್ತಾರೆಂಬ ತೀರ್ಮಾನಕ್ಕೆ ಪ್ರೊ॥ ಸೇನ್ ಬರುತ್ತಾರೆ. ಸ್ತ್ರೀಯರು ಭಯಂಕರವಾದ ಲಿಂಗತಾರತಮ್ಯಕ್ಕೆ ತೀವ್ರವಾದ ಅನಾದರಣೆಗೆ ಒಳಗಾಗುವುದನ್ನು ಅವರು ವಿಶದಪಡಿಸಿದ್ದಾರೆ.

ಭಾರತದಲ್ಲಿ: ದಕ್ಷಿಣ ಏಶಿಯಾದಲ್ಲಿ 'ಲಿಂಗ ಪ್ರಮಾಣ' ಕಡಿಮೆ ಇರುವ ದೇಶಗಳಲ್ಲಿ 'ಮಾತೃದೇವೋ ಭವ' ಎಂದು ಭಾವಿಸುವ ಭಾರತವೂ ಒಂದು ಇಲ್ಲಿ ಸರಾಸರಿ 100 ಪುರುಷರಿಗೆ 93 ಮಂದಿ ಮಾತ್ರ ಸ್ತ್ರೀಯರಿದ್ದಾರೆ ಎಂದು 1991ರ ಜನಗಣತಿ ಲೆಕ್ಕಗಳು ತಿಳಿಸುತ್ತವೆ. ಭಾರತಕ್ಕೆ ಸಂಬಂಧಿಸಿದ ಈ ಸಮಸ್ಯೆಯನ್ನು ಜೀನ್ ಡ್ರೇಜ್ ಮತ್ತು ಅಮರ್ತ್ಯ ಸೇನ್ ಅವರು ತಮ್ಮ ''ಇಂಡಿಯಾ : ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ಅವಕಾಶ'' ಎಂಬ ಕೃತಿಯಲ್ಲಿ ವಿಶದವಾಗಿ ಪರಿಶೀಲಿಸಿದ್ದಾರೆ. ಅವರ ಪರಿಶೀಲನೆಯಲ್ಲಿ ಗಮನಾರ್ಹವಾದ ಕೆಲವು ಅಂಶಗಳನ್ನು ಮುಂದೆ ನೋಡಬಹುದು.

'ಮಾತೃದೇವೋ ಭವ' ಎಂಬ ಮಂತ್ರವನ್ನು ಉದ್ಘೋಷಿಸುವ ನಮ್ಮ ಭಾರತ ದೇಶದಲ್ಲಿ ಪುರುಷನೊಡನೆ ಸಮಾನವಾದ ಸ್ಥಾನ ಸ್ತ್ರೀಗೆ ಇಲ್ಲ. ವಿದ್ಯೆ ಮತ್ತು ಸೃಜನಾತ್ಮಕ ಶಕ್ತಿಗಳು ಬೆಳೆಸುವ ದಿಕ್ಕಿನಲ್ಲಿ ಮಾತ್ರವಲ್ಲ; ಪೋಷಣೆ, ಆರೋಗ್ಯ ರಕ್ಷಣೆಯಂತಹ ಅತಿ ಮುಖ್ಯವಾದವುಗಳಲ್ಲೂ ಮೂಲಭೂತ ಅಗತ್ಯವಾದ ಸಮಾನತೆ ಲೋಪಗೊಂಡಿದೆ.

ಅಭಿವೃದ್ಧಿಹೊಂದಿದ ದೇಶಗಳೊಡನೆ ಹೋಲಿಸಿದರೆ ನಮ್ಮ ದೇಶದ 'ಲಿಂಗ ಪ್ರಮಾಣ' ತೀರ ಕಡಿಮೆ ಇದೆ. ಪಕ್ಕದ ಪಾಕಿಸ್ತಾನದ ಪರಿಸ್ಥಿತಿ ನಮ್ಮ ದೇಶಕ್ಕಿಂತ ಹೀನಾಯವಾಗಿದೆ. ಅಲ್ಲಿ ಪ್ರತಿ ನೂರು ಪುರುಷರಿಗೆ 91 ಮಂದಿ ಮಾತ್ರ ಸ್ತ್ರೀಯರಿದ್ದಾರೆ. ನಮ್ಮ ದೇಶದೊಳಗಿನ ವಿವಿಧ ರಾಜ್ಯಗಳಲ್ಲಿನ ಸ್ತ್ರೀ ಪುರುಷ ಪ್ರಮಾಣಗಳಲ್ಲೂ ಭೇದಗಳಿವೆ. ಆರ್ಯಾವರ್ತವೆಂದು ಕರೆಯಲಾದ ಉತ್ತರ ಭಾರತದ ಅಧಿಕ ಪ್ರದೇಶಗಳಲ್ಲಿ 'ಲಿಂಗ ಪ್ರಮಾಣ' ತುಂಬಾ ಕಡಿಮೆ ಇದೆ. ಪ್ರತಿ ನೂರು ಪುರುಷರಿಗೆ ಹರ್ಯಾಣದಲ್ಲಿ 87 ಮಂದಿ, ಪಂಜಾಬಿನಲ್ಲಿ 88 ಮಂದಿ, ರಾಜಾಸ್ಥಾನದಲ್ಲಿ 91 ಮಂದಿ ಮಾತ್ರ ಸ್ತ್ರೀಯರಿದ್ದಾರೆ. ದ್ರಾವಿಡ ದೇಶವೆಂದು ಕರೆಯಲಾದ ದಕ್ಷಿಣ ಭಾರತದಲ್ಲಿ ಪರಿಸ್ಥಿತಿ ಮೇಲಿನಷ್ಟು ಅತಿ ದಾರುಣವಾಗಿಲ್ಲ. ತಮಿಳುನಾಡು, ಆಂಧ್ರ ಪ್ರದೇಶಗಲಲ್ಲಿ 97 ಮಂದಿ, ಕರ್ನಾಟಕದಲ್ಲಿ 96 ಮಂದಿ ಸ್ತ್ರೀಯರಿದ್ದಾರೆ. ಭಾರತದ ಬೇರಾವ ರಾಜ್ಯದಲ್ಲೂ ಈ ಪ್ರಮಾಣದಲ್ಲಿ ಸ್ತ್ರೀಯರಿಲ್ಲ. ಇದರಿಂದ ನಮ್ಮ ದೇಶದಲ್ಲಿ ರೂಢಿಯಲ್ಲಿರುವ ಲಿಂಗ ತಾರತಮ್ಯ ಎಷ್ಟು ತೀವ್ರವಾಗಿದೆ ಎಂಬುದನ್ನು ಊಹಿಸಬಹುದು. ಈ ಪರಿಸ್ಥಿತಿ ಎಲ್ಲಾ ರಾಜ್ಯಗಳಲ್ಲೂ ಒಂದೇ ರೀತಿ ಇಲ್ಲ. ಭಾರತದ ವಾಯವ್ಯ ರಾಜ್ಯಗಳಲ್ಲಿ ಲಿಂಗತಾರತಮ್ಯ ತೀವ್ರ ಸ್ಥಾಯಿಯಲ್ಲಿರುವಂತೆ ಅಲ್ಲಿಯ ಸ್ತ್ರೀ ಪುರುಷರ ಜನಗಣತಿ ತಿಳಿಸುತ್ತದೆ. ಸ್ತ್ರೀಯರನ್ನು ಪುರುಷರೊಡನೆ ಬೆರೆಯಲು ಬಿಡದಿರುವುದು, ಕೆಲಸ ಕಾರ್ಯಗಳಲ್ಲಿ ಸ್ತ್ರೀಯರನ್ನು ಹೆಚ್ಚಾಗಿ ಪಾಲ್ಗೊಳ್ಳದಂತೆ ತಡೆಯುವುದು, ಸಾಕ್ಷರತೆಯಲ್ಲಿ ವಿಶೇಷ ವ್ಯತ್ಯಾಸವಿರುವುದು, ಆಸ್ತಿ ಹಕ್ಕುಗಳು ಸ್ತ್ರೀಯರಿಗೆ ನೆಪಮಾತ್ರಕ್ಕೆ ಇರುವುದು, ಹೆರಿಗೆಯಲ್ಲಿ ಗಂಡು ಮಕ್ಕಳಿಗೆ ಪ್ರಾಧಾನ್ಯತೆ ನೀಡುವುದು, ಹೆಣ್ಣುಮಕ್ಕಳಿರುವೆಡೆಯಲ್ಲಿ ಅಧಿಕ ನಿರಾದರಣೆ ತೋರುವುದು, ಸ್ತ್ರೀ ಮದುವೆಯಾಗಿ ಗಂಡನ ಮನೆ ಸೇರಿದ ನಂತರ ತವರಿನವರ ಜೊತೆ ಸಂಬಂಧಗಳನ್ನು ಕಳೆದುಕೊಳ್ಳಬೇಕೆಂಬ ಕಟ್ಟುಪಾಡು ಈ ಪ್ರಾಂತಗಳಲ್ಲಿ ಅಧಿಕವಾಗಿ ಜಾರಿಯಲ್ಲಿವೆ. ಈ ಪರಿಸ್ಥಿತಿಯೊಡನೆ ಹೋಲಿಸಿದರೆ ದಕ್ಷಿಣ ಭಾರತದಲ್ಲಿರುವ ಲಿಂಗತಾರತಮ್ಯ ಅಷ್ಟು ಕಠಿಣವೆನಿಸುವುದಿಲ್ಲ. ಕೇರಳ ರಾಜ್ಯದೊಳಗಿನ ಮಹಿಳೆಯರ ಸ್ಥಾನಮಾನ ದೇಶದ ಮಿಕ್ಕೆಲ್ಲಾ ರಾಜ್ಯಗಳ ಸ್ತ್ರೀಯರ ಸ್ಥಾನಮಾನಗಳಿಗಿಂತ ಎಷ್ಟೋ ಉತ್ತಮವಾಗಿರುವುದು ಕಂಡುಬರುತ್ತದೆ. ಸ್ತ್ರೀಯರಲ್ಲಿ ಸಾಕ್ಷರತೆ ಅಧಿಕವಾಗಿರುವುದು, ರಾಜಕೀಯ ಹಾಗೂ ಸಾಮಾಜಿಕ ಚಟುವಟಿಕೆಗಳಲ್ಲಿ ಸ್ತ್ರೀಯರು ಹೆಚ್ಚಾಗಿ ಪಾಲ್ಗೊಳ್ಳುವುದು, ಕೆಲವು ಜಾತಿಗಳಲ್ಲಿ ಅವರ ವಂಶಪಾರಂಪರ್ಯ ಆಸ್ತಿಹಕ್ಕುಗಳು ತಾಯಿಂದ ಹೆಣ್ಣು ಮಕ್ಕಳಿಗೆ ಹಾದು ಬರುವುದು ಇದಕ್ಕೆ ಕಾರಣಗಳಾಗಿ ಪರಿಗಣಿಸಬಹುದು ಎಂದು ಡ್ರೇಜ್ ಮತ್ತು ಸೇನ್‌ರು ಅಭಿಪ್ರಾಯಪಡುತ್ತಾರೆ.

ಭ್ರೂಣಾವಸ್ಥೆಯಲ್ಲಿ ಹೆಣ್ಣು ಕೂಸುಗಳನ್ನು ಸಾಯಿಸುವುದರಿಂದ ಮಾತ್ರ ಸ್ತ್ರೀ ಪುರುಷರ ಸಂಖ್ಯಾ ಪ್ರಮಾಣದಲ್ಲಿ ವ್ಯತ್ಯಾಸಗಳು ಸಂಭವಿಸುತ್ತವೆ ಎಂಬವಾದವನ್ನು ಅವರು ಒಪ್ಪುವುದಿಲ್ಲ. ಸ್ತ್ರೀ ಭ್ರೂಣಹತ್ಯೆ ಇಲ್ಲವೇ ಇಲ್ಲ ಎಂದೂ ಅವರು ಹೇಳುವುದಿಲ್ಲ. ಬಾಲಕರು ಮತ್ತು ಬಾಲಕಿಯರ ಮರಣದ ಪ್ರಮಾಣದಲ್ಲಿರುವ ವ್ಯತ್ಯಾಸವು ಸ್ತ್ರೀಪುರುಷ ಸಂಖ್ಯಾ ಪ್ರಮಾಣದ ವ್ಯತ್ಯಾಸಕ್ಕೆ ಒಂದು ಕಾರಣವೆಂದು ಅವರು ಹೆಸರಿಸುತ್ತಾರೆ. ಹುಟ್ಟಿದ ಒಂದು ವರ್ಷದೊಳಗೆ ಸಾಯುವ ಗಂಡು ಮತ್ತು ಹೆಣ್ಣು ಮಕ್ಕಳಲ್ಲಿ ವ್ಯತ್ಯಾಸ ತೀರ ಕಡಿಮೆ. ಹುಟ್ಟಿದ ಸಾವಿರ ಗಂಡು ಮಕ್ಕಳಲ್ಲಿ 113 ಮಂದಿ ವರ್ಷ ತುಂಬುವುದರೊಳಗೆ ಸತ್ತರೆ, ಹೆಣ್ಣು ಮಕ್ಕಳಲ್ಲಿ 115 ಮಂದಿ ಸಾಯುತ್ತಾರೆ. ಆದರೆ ಒಂದು ವರ್ಷದ ನಂತರ 68 ಗಂಡು ಮಕ್ಕಳು ಸತ್ತರೆ 91 ಹೆಣ್ಣು ಮಕ್ಕಳು ಸಾಯುತ್ತಾರೆ. ಇದರಿಂದ ಒಂದು ವರ್ಷ ತುಂಬಿದ ನಂತರವೇ ಬಾಲಕ ಮತ್ತು ಬಾಲಕಿಯರ ಸಾವಿನ ಪ್ರಮಾಣದಲ್ಲಿ ಹೆಚ್ಚು ವ್ಯತ್ಯಾಸವಾಗುತ್ತಿರುವುದು ಎದ್ದುಕಾಣುತ್ತದೆ. ಭ್ರೂಣಾವಸ್ಥೆಯಲ್ಲಿ ಹೆಣ್ಣು ಕೂಸನ್ನು ಸಾಯಿಸುವುದು ಇದರ ಮೇಲೆ ಪ್ರಭಾವ ಬೀರಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಗಂಡು ಮಕ್ಕಳ ಮೇಲೆ ವಿಶೇಷ ಆದರ ತೋರಿಸುತ್ತಾ, ಹೆಣ್ಣು ಮಕ್ಕಳನ್ನು ನಿರಾದರಣೆಗೆ ಈಡು ಮಾಡುತ್ತಿರುವುದೇ ಹೆಣ್ಣು ಮಕ್ಕಳ ಅಧಿಕ ಸಾವಿಗೆ ಕಾರಣವೆಂದು ಅವರು ನಿರೂಪಿಸಿದ್ದಾರೆ. ಆರೋಗ್ಯಪಾಲನೆ, ಪೋಷಣೆ, ಮಕ್ಕಳ ಇತರ ಅವಶ್ಯಕತೆಗಳ ವಿಷಯದಲ್ಲಿ ಎದ್ದುಕಾಣುವ ಲಿಂಗತಾರತಮ್ಯಗಳು ಇದಕ್ಕೆ ಕಾರಣವೆಂದು ಅವರು ತೀರ್ಮಾನಿಸುತ್ತಾರೆ.

'ಮಗುವಿನ ಸಾವಿನಲ್ಲಿ ಲಿಂಗಭೇದ' ಎಂಬ ಸಂಶೋಧನಾ ಪ್ರಬಂಧದಲ್ಲಿ ಮೇಲಿನ ವಿಷಯವನ್ನು ಪ್ರಸ್ತಾಪಿಸುತ್ತಾ ಸುನೀತಿ ಕಿಶೋರ್ ಹೀಗೆ ದಾಖಲಿಸಿದ್ದಾರೆ: ''ಬಾಲಕ, ಬಾಲಕಿಯರ ಮರಣ ಪ್ರಮಾಣದಲ್ಲಿ ವ್ಯತ್ಯಾಸಗಳಿವೆ ಎಂಬುದರಲ್ಲಿ ಸಂದೇಹಗಳಿಲ್ಲ ವಿಶಾಲ ಭಾರತದಲ್ಲಿ ಹೆಣ್ಣು ಮಕ್ಕಳ ಪ್ರಾರಂಭದ ಜೀವನ ಹಂತದಲ್ಲಿ ಸಾವಿನ ಪ್ರಮಾಣ ಅದೇ ವಯಸ್ಸಿನ ಗಂಡು ಮಕ್ಕಳ ಸಾವಿನ ಪ್ರಮಾಣಕ್ಕಿಂತ ಹೆಚ್ಚಾಗಿದೆ. ಮೊದಲ ವರ್ಷಕ್ಕಿಂತ ಐದನೇ ವರ್ಷದ ಬಾಲಕಿಯರ ಸಾವಿನ ಪ್ರಮಾಣ ಅದೇ ವಯಸ್ಸಿನ ಗಂಡು ಮಕ್ಕಳ ಮರಣ ಪ್ರಮಾಣಕ್ಕಿಂತ ತುಂಬಾ ಹೆಚ್ಚಾಗಿದೆ.''

ಭಾರತದಲ್ಲಿ ಈ ವಿಷಯದಲ್ಲಿ ನಡೆದ ಕೆಲವು ಪರಿವೀಕ್ಷಣೆಗಳನ್ನು ಸುನೀತ ಅವರು ಹೆಸರಿಸಿದ್ದಾರೆ. ಪಂಜಾಬಿನಲ್ಲಿ 1965 ಮತ್ತು 1972 ರಲ್ಲಿ ನಡೆದ ಪರಿವೀಕ್ಷಣೆಗಳು ಮಗುವಿಗೆ ಎದೆಹಾಲು ಬಿಡಿಸುವ ಕಾಲದಲ್ಲಿ

ತಲೆದೋರುವ ಪೋಷಕಾಹಾರ ಕೊರತೆಯಿಂದ ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳು ಹೆಚ್ಚು ಭಾದೆ ಪಡುತ್ತಾರೆಂಬುದನ್ನು ರುಜುವಾತು ಪಡಿಸಿವೆ. ವಿಶೇಷ ಪೋಷಣೆ ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳಿಗೇ ಹೆಚ್ಚಾಗಿ ದೊರೆಯುತ್ತದೆ ಎಂಬುದು ಪರಿವೀಕ್ಷಣೆಯಿಂದ ಸ್ಪಷ್ಟವಾಗಿದೆ.

ಪೋಷಣೆಯಲ್ಲಿ ಲಿಂಗತಾರತಮ್ಯ ಬಾಲ್ಯದಲ್ಲೇ ನಿಲ್ಲಲಿಲ್ಲ ದೊಡ್ಡವರಾದ ಮೇಲೂ ಅದು ಸ್ತ್ರೀಯರನ್ನು ಬೆನ್ನು ಹತ್ತಿತ್ತೆಂದು ಉತ್ತರ ಭಾರತದಲ್ಲಿ ನಡೆದ ನಾರಂಗ್‌ವಾಲಾ ಅಧ್ಯಯನ ಸೂಚಿಸುತ್ತದೆ. ಪುರುಷರಿಗೆ ಲಭಿಸುವ ಕ್ಯಾಲರಿಗಳಲ್ಲಿ ಶೇ. 86, ಪ್ರೊಟೀನ್‌ನಲ್ಲಿ ಶೇ. 84. ಕ್ಯಾಲ್ಸಿಯಂನಲ್ಲಿ ಶೇ. 69, ಕಬ್ಬಿಣಾಂಶದಲ್ಲಿ ಶೇ. 88, 'ಎ' ಅನ್ನಾಂಗದಲ್ಲಿ ಶೇ. 78 ಮಾತ್ರ ಸ್ತ್ರೀಯರಿಗೆ ಲಭಿಸುತ್ತದೆ ಎಂದು ಆ ಅಧ್ಯಯನದಿಂದ ಬೆಳಕಿಗೆ ಬಂದಿದೆ. ನಮ್ಮ ದೇಶದಲ್ಲಿ ನಡೆದ ಇನ್ನೂ ಕೆಲವು ಪರಿವೀಕ್ಷಣೆಗಲು ಈ ಅಂಶವನ್ನು ದೃಢಪಡಿದಿವೆ.

ಸ್ತ್ರೀಯರ ಸಂಖ್ಯೆ : 20ನೇ ಶತಮಾನದ ಪ್ರಾರಂಭದಿಂದ 'ಲಿಂಗ ಪ್ರಮಾಣ' (ಸಾವಿರ ಪುರುಷರಿಗೆ ಎಷ್ಟು ಸ್ತ್ರೀಯರಿದ್ದಾರೆ ಎಂಬ ಲೆಕ್ಕ) ನಿರಂತರವಾಗಿ ಕಡಿಮೆಯಾಗುತ್ತಲೇ ಬಂದಿರುವುದು ಕಂಡುಬರುತ್ತದೆ. 1901ರಲ್ಲಿ ಪ್ರತಿ ಸಾವಿರ ಪುರುಷರಿಗೆ ಸರಾಸರಿ 972 ಸ್ತ್ರೀಯರಿದ್ದರು. 1991 ವೇಳೆಗೆ, ಅಂದರೆ 90 ವರ್ಷಗಲ ನಂತರ, ಸ್ತ್ರೀಯರ ಸಂಖ್ಯೆ 927ಕ್ಕೆ ಇಳಿದಿದೆ. 1901ರಿಂದಲ್ರೆ ವಾಯವ್ಯ ಪ್ರಾಂತಗಳಲ್ಲಿ 'ಲಿಂಗ ಪ್ರಮಾಣ' ದೇಶದ ಇತರ ಪ್ರಾಂತಗಳಿಗಿಮತ ಕಡಿಮೆಯೇ ಇದೆ. ಈ ಪ್ರಮಾಣ ದಕ್ಷಿಣ ರಾಜ್ಯಗಳಲ್ಲಿ ರಾಷ್ಟ್ರದ ಸರಾಸರಿಗಿಂತ ಸ್ವಲ್ಪ ಹೆಚ್ಚಾಗಿಯೇ ಇದೆ.

ಕೇರಳ ರಾಜ್ಯದಲ್ಲಿ ಮಾತ್ರ 'ಲಿಂಗ ಪ್ರಮಾಣ' ಅಬಾಧಿತವಾಗಿ ಯಾವಾಗಲೂ ಅಧಿಕವಾಗಿಯೇ ಇದೆ. 1901ರಲ್ಲಿ ಅದು 1004 ಇತ್ತು.1991ರ ವೇಳೆಗೆ ಅದು 1036ಕ್ಕೆ ಏರಿದೆ. ಈ 90 ವರ್ಷಗಳಲ್ಲಿ ಯಾವ ದಶಕದಲ್ಲೂ ಅಲ್ಲಿ ಸ್ತ್ರೀಯರ ಸಂಖ್ಯೆ ಪುರುಷರ ಸಂಖ್ಯೆಗಿಂತ ಕಡಿಮೆಯಾಗಿಲ್ಲ. ಅದು ನಿರಂತರವಾಗಿ ಬೆಳೆಯುತ್ತಲೇ ಇದೆ.

ಆರ್ಯಾವರ್ತಕ್ಕೆ ಸೇರಿದ ಉತ್ತರ ಪ್ರದೇಶದಲ್ಲಿ ಇದಕ್ಕೆ ತದ್ವಿರುದ್ಧವಾದ ಕಹಿ ಚಿತ್ರ ಕಂಡುಬರುತ್ತದೆ. 1901ರಲ್ಲಿ ಪ್ರತಿ ಸಾವಿರ ಪುರುಷರಿಗೆ ಅಲ್ಲಿ 937 ಸ್ತ್ರೀಯರು ಮಾತ್ರ ಇದ್ದರು. 1991 ಬರುವ ವೇಳೆಗೆ ಸ್ತ್ರೀಯರ ಸಂಖ್ಯೆ 879ಕ್ಕೆ ಇಳಿಯಿತು. ಹೀಗೆಯೇ ಬಿಹಾರ, ಒರಿಸ್ಸಾ,ತಮಿಳುನಾಡು, ಮಧ್ಯ ಪ್ರದೇಶ, ಮಹಾರಾಷ್ಟ್ರಗಳಲ್ಲಿ ಸ್ತ್ರೀಯರ ಜನಸಂಖ್ಯೆ ಕಡಿಮೆಯಾಗಿದೆ. ಈ ಆರು ರಾಜ್ಯಗಳೊಳಗಿನ ಇಳಿಮುಖವನ್ನು ರಾಷ್ಟ್ರದ ಸ್ತ್ರೀ ಜನಸಂಖ್ಯಾ ಇಳಿತದ ಅತ್ಯಧಿಕ ಭಾಗವಾಗಿ ಪರಿಗಣಿಸಬಹುದೆಂದು ಡ್ರೇಜ್ ಮತ್ತು ಸೇನ್ ಅವರು ಸೂಚಿಸಿದ್ದಾರೆ. ಅದರಲ್ಲೂ ಬಿಹಾರ ಮತ್ತು ಉತ್ತರ ಪ್ರದೇಶಗಳ ಇಳಿತ ಇಡೀ ಭಾರತದ ಇಳಿತದಲ್ಲಿ ಮುಖ್ಯ ಭಾಗವಾಗಿದೆ ಎಂದು ಅವರು ಲೆಕ್ಕಹಾಕಿದ್ದಾರೆ.

30-35 ತುಂಬಿದ ನಂತರ ಸ್ತ್ರೀಯರ ಮರಣದ ಪ್ರಮಾಣ ಪುರುಷರ ಮರಣ ಪ್ರಮಾಣಕ್ಕಿಂತ ಕಡಿಮೆ ಇರುತ್ತದೆ ಎಂದು ಜನಗಣತಿಯ ಲೆಕ್ಕಗಳಿಂದ ತಿಳಿದುಬರುತ್ತದೆ. ಆದರೂ, ಈ ವಯಸ್ಸು ದಾಟಿದ ನಂತರವೂ 'ಲಿಂಗ ಪ್ರಮಾಣ' ಕಡಿಮೆಯೇ ಇರುತ್ತದೆ. ಇದರಿಂದ ಕಂಡುಬರುತ್ತಿರುವ ಆರ್ಥಿಕ ಅಭಿವೃದ್ಧಿಯ ಪರಿಣಾಮ ಮತ್ತು ಆಧುನಿಕ ವೈದ್ಯ ಚಿಕಿತ್ಸಾ ವಿಧಾನಗಳು ಸ್ತ್ರೀಯರಿಗಿಂತ ಪುರುಷರಿಗೇ ಹೆಚ್ಚಾಗಿ ಲಭಿಸುತ್ತಿರುವಂತೆ ಕಂಡುಬರುತ್ತದೆ. ಸ್ತ್ರೀಯರಿಗೆ ಬರುವ ಪ್ರತ್ಯೇಕ ರೋಗಗಳ ನಿವಾರಣೆಗೆ ಅಗತ್ಯವಾದ ಚಿಕಿತ್ಸಾ ಸೌಕರ್ಯಗಳು ಅವರ ಅಗತ್ಯಗಳಿಗೆ ತಕ್ಕ ಪ್ರಮಾಣದಲ್ಲಿ ದೊರೆಯುವಂತೆ ಏರ್ಪಾಟಾಗಿಲ್ಲ.

2001ರ ಜನಗಣತಿ : ಮಾರ್ಚ್ 9 1,2001ರಂದು ಭಾರತದ ಜನಸಂಖ್ಯೆ 102 ಕೋಟಿ ದಾಟಿತು ಎಂದು ಅಂದು ಬಿಡುಗಡೆಯಾದ ಜನಗಣತಿಯ ಸಂಕ್ಷಿಪ್ತ ವರದಿಗಳು ತಿಳಿಸುತ್ತವೆ. ಆ ದಿನದ ಮುಂಜಾನೆ ಭಾರತದ ಜನಸಂಖ್ಯೆ 102,70,15,247 ಇತ್ತು. ಅದರಲ್ಲಿ 53,12,77,078 ಪುರುಷರು ಮತ್ತು 47,57,38,169 ಸ್ತ್ರೀಯರು ಸೇರಿದ್ದರು.

2001ರ ಜನಗಣತಿ ಒಂದು ರೀತಿ ಆಶಾದಾಯಕ ಸೂಚನೆಗಳನ್ನು ನೀಡುತ್ತದೆ. ಅದರ ಪ್ರಕಾರ ಸಾಕ್ಷರತೆಯ ಪ್ರಮಾಣ ಕಳೆದ ದಶಕದಲ್ಲಿ ಗಮನಾರ್ಹವಾಗಿ ಏರಿದೆ, 'ಲಿಂಗ ಪ್ರಮಾಣ' ಅಭಿವೃದ್ಧಿ ಹೊಂದಿದೆ ಮತ್ತು ಜನಸಂಖ್ಯಾ ಏರಿಕೆಯ ದರ ಕಡಿಮೆಯಾಗಿದೆ. ಆದರೆ ಅವು ರಾಜ್ಯಗಳೊಳಗೆ ಭಿನ್ನ ಪ್ರಮಾಣದಲ್ಲಿ ಏರಿಳಿತಗಳನ್ನು ತೋರಿಸುತ್ತವೆ.

1901 ರಿಂದ ಇಳಿಯುತ್ತಾ ಬಂದ 'ಲಿಂಗ ಪ್ರಮಾಣ' ಅವಮಾನಕರವಾಗಿತ್ತು ಮತ್ತು ಕಳವಳಕ್ಕೆ ಕಾರಣವಾಗಿತ್ತು. ಮಾರ್ಚ್ 1 ರಂದು ಬಿಡುಗಡೆಯಾದ 2001ರ ಜನಗಣತಿಯು 'ಲಿಂಗ ಪ್ರಮಾಣ' ಅಂದರೆ ಸಾವಿರ ಪುರುಷರಿಗೆ ಇರುವ ಸ್ತ್ರೀಯರ ಸಂಖ್ಯೆ ಏರುಮುಖವಾಗಿರುವುದನ್ನು ತೋರಿಸುತ್ತದೆ. ಅನೇಕ ದಶಕಗಳ ನಂತರ ಮೊಟ್ಟಮೊದಲ ಬಾರಿಗೆ ಸ್ವಲ್ಪ ಮಟ್ಟಿಗಾದರೂ 'ಲಿಂಗ ಪ್ರಮಾಣ' ಹೆಚ್ಚಾಗಿದೆ. ಆದರೆ ಅದು ಹೆಮ್ಮೆ ತರುವಂತಹ ಸಾಧನೆಯೇನಲ್ಲ. ಸ್ವಾಭಾವಿಕವಾಗಿ 'ಲಿಂಗ ಪ್ರಮಾಣವು' 1000ಕ್ಕಿಂತ ಹೆಚ್ಚಾಗಿರಬೇಕೆಂಬುದು ನಿರೀಕ್ಷೆ. ಇತ್ತೀಚಿನ ಈ ಸಂಖ್ಯೆ 933 ತುಂಬಾ ಕಡಿಮೆಯಾಗಿದೆ. ಅಷ್ಟೇ ಅಲ್ಲ ಅದು ಒಂದು ಶತಮಾನದ ಹಿಂದೆ, ಅಂದರೆ 1901 ರಲ್ಲಿ ಇದ್ದ ಸಂಖ್ಯೆಗಿಂತ -972ಕ್ಕಿಂತಲೂ- ಕಡಿಮೆಯಾಗಿದೆ. ಅದು ಮಕ್ಕಳ 'ಲಿಂಗ ಪ್ರಮಾಣ'ದಲ್ಲಿ ಇನ್ನೂ ಕರಾಳವಾಗಿ ಕಾಣಿಸಿಕೊಂಡಿದೆ. 0-6 ವಯೋ ಗುಂಪಿನ 'ಲಿಂಗ ಪ್ರಮಾಣ' 1991ರಲ್ಲಿ 945 ಇದ್ದುದು 2001ರಲ್ಲಿ 927ಕ್ಕೆ ಇಳಿದಿದೆ.

ಎಲ್ಲಾವಯಸ್ಸಿನವರ ರಾಷ್ಟ್ರೀಯ 'ಲಿಂಗಪ್ರಮಾಣ' ಐದು ಪ್ರಮುಖ ರಾಜ್ಯಗಳನ್ನು ಬಿಟ್ಟು-ಒಟ್ಟಾರೆ ಹೆಚ್ಚಾಗಿದೆ. ಗುಜರಾತ್, ಹಿಮಾಚಲ ಪ್ರದೇಶ, ಹರ್ಯಾಣ, ಪಂಜಾಬ್ ಮತ್ತು ದೆಹಲಿಗಳಲ್ಲಿ ಪ್ರತಿ ಸಾವಿರ ಪುರುಷರಿಗೆ ಇರುವ ಸ್ತ್ರೀಯರ ಸಂಖ್ಯೆ ಕಳೆದ ದಶಕದಲ್ಲಿ ಕಡಿಮೆಯಾಗಿದೆ.

ಅದರಲ್ಲೂ ಕೊನೆಯ ಮೂರು ರಾಜ್ಯಗಳಲ್ಲಿ 'ಲಿಂಗ ಪ್ರಮಾಣ' ಮೊದಲೇ ಕಡಿಮೆಯಾಗಿತ್ತು. ರಾಷ್ಟ್ರದ ರಾಜಧಾನಿಯನ್ನೊಳಗೊಂಡ ದೆಹಲಿ ರಾಜ್ಯವು ದೇಶದಲ್ಲೇ ಅತ್ಯಂತ ಕಡಿಮೆ 'ಲಿಂಗ ಪ್ರಮಾಣ'ವನ್ನು ಹೊಂದಿದೆ ಎಂಬುದು ಎಷ್ಟು ಖೇದನೀಯ! ಕೇಂದ್ರಾಡಳಿತ ಕ್ಕೊಳಪಟ್ಟ ದಾದ್ರ ಮತ್ತು ನಗರ್ ಹವೇಲಿಯ 'ಲಿಂಗ ಪ್ರಮಾಣ'ಕ್ಕಿಂತ ದೆಹಲಿಯ 'ಲಿಂಗ ಪ್ರಮಾಣ' ಮೇಲು ಎಂದು ಪ್ರಮಾಣ'ಕ್ಕಿಂತ ದೆಹಲಿಯ 'ಲಿಂಗ ಪ್ರಮಾಣ'ಮೇಲು ಎಂದು ಸಮಾಧಾನಪಡಬಹುದು !!

ಆರ್ಥಿಕಾಭಿವೃದ್ಧಿ, ಆಧುನಿಕತೆಗಳ ಮಧ್ಯೆಯೂ 'ನಾಪತ್ತೆ'ಯಾಗುತ್ತಿರುವ ಸ್ತ್ರೀಯರ ಬಗ್ಗೆ ಪುರುಷ ಪ್ರಧಾನ ಸಮಾಜ ತೀವ್ರ ಗಮನಹರಿಸಬೇಕಾಗಿದೆ.

ಕೃಪೆ : ಹೊಸತು

# ಸ್ತ್ರೀವಾದಿ ಅಧ್ಯಯನಕ್ಕೊಂದು ಹೊಸ ಸೇರ್ಪಡೆ

ಸಾಹಿತ್ಯ ಅಧ್ಯಾಪಕಿಯಾಗಿ, ಸಂಘಟಕಿಯಾಗಿ ಕಳೆದ ಎರಡು ಎರಡು ದಶಕಗಳಿಂದ ಕ್ರಿಯಾಶೀಲವಾಗಿರುವ ಲೇಖಕಿ ಡಾ। ಸಬಿಹಾರವರ ಮೊದಲ ವಿಮರ್ಶಾ ಸಂಕಲನವಿದು. ಕಳೆದ ಹತ್ತು ವರ್ಷಗಳಲ್ಲಿ ಅವರು ವಿವಿಧ ಸಭೆ, ವಿಚಾರ ಸಂಕಿರಣಗಳಲ್ಲಿ ಮಂಡಿಸಿದ ಲೇಖನಗಳು, ಕೆಲವು ವಿಶಿಷ್ಟ ಸಂದರ್ಭಗಳಿಗೆಂದು ಬರೆದ ಬರವಣಿಗೆಗಳು ಇಲ್ಲಿ ಸಂಕಲಿತವಾಗಿವೆ. ಸಾಹಿತ್ಯ ಚರ್ಚೆಯೇ ಪ್ರಧಾನವಾಗಿರುವ ಈ ಕೃತಿಯು ಇಂದು ವ್ಯಾಪಕವಾಗಿ ಚರ್ಚೆಯಲ್ಲಿರುವ ಸ್ತ್ರೀವಾದಿ ವಿಮರ್ಶಾ ಪದ್ಧತಿಗೆ ಹಲವಾರು ಪರಿಕರಗಳನ್ನು ಒದಗಿಸಿಕೊಡುತ್ತದೆ. ಜೊತೆಗೆ, ವಿಮರ್ಶಾವಲಯವನ್ನು ಹಿಗ್ಗಿಸುವ ಮತ್ತು ಹೊಸ ಒಳನೋಟಗಳನ್ನು ನೀಡುವ ದಿಕ್ಕಿನಲ್ಲಿ ಕಾರ್ಯಪ್ರವೃತ್ತವಾಗಿದೆ.

ಈ ಕೃತಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬರಹಗಳ ವಿಮರ್ಶೆಯೇ ಪ್ರಮುಖವಾಗಿದೆ. ನಾಲ್ಕು ಲೇಖನಗಳನ್ನು ಬಿಟ್ಟರೆ ಉಳಿದೆಲ್ಲವೂ ಸ್ತ್ರೀಸಾಹಿತ್ಯದ ವಿಮರ್ಶೆಯಾಗಿದೆ. ಇಲ್ಲಿನ ವಿಮರ್ಶೆಯ ಸ್ವರೂಪ ಲಕ್ಷಣಗಳನ್ನು ಗಮನಿಸಿದಾಗ ಇವುಗಳನ್ನು ಮೂರು ವರ್ಗಗಳಾಗಿ ವಿಂಗಡಿಸಬಹುದು.

1. ಸಾಹಿತ್ಯ ಚರಿತ್ರೆಯ ಲಕ್ಷಣಗಳುಳ್ಳ ಲೇಖನಗಳು.
2. ವ್ಯಕ್ತಿ ಕೇಂದ್ರಿತ ವಿಮರ್ಶಾ ಲೇಖನಗಳು.
3. ಹೊಸ ಒಳನೋಟಗಳನ್ನು ಪ್ರಕಟಿಸುವ ಲೇಖನಗಳು.

'ಅಕ್ಷರ ಸೃಷ್ಟಿಯ ಆಳ ಅಗಲಗಳು' ಲೇಖನದಲ್ಲಿ ವಿವಿಧ ಕಾಲಘಟ್ಟದಲ್ಲಿ ಕನ್ನಡ ಸಾಹಿತ್ಯದ ಮುಖ್ಯ ವಾಹಿನಿಯಲ್ಲಿ ಪಾಲ್ಗೊಂಡು ತಮ್ಮ ವಿಶಿಷ್ಟತೆಯನ್ನು ಮೆರೆದ ದಕ್ಷಿಣ ಕನ್ನಡದ ಬರಹಗಾರರನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ರತ್ನಾಕರವರ್ಣಿ ಮುದ್ದಣನವರಿಂದ ಹಿಡಿದು ಇಂದಿನ ವೈದೇಹಿಯವರ ಸಾಹಿತ್ಯ ವೈಶಿಷ್ಟ್ಯಗಳನ್ನು ಪಟ್ಟಿಮಾಡುತ್ತಲೇ ದಕ್ಷಿಣ ಕನ್ನಡದ ಬರವಣಿಗೆಯ ಸಾಧನೆಯತ್ತ ಗಮನ ಸೆಳೆಯುವಲ್ಲಿ ಸಬಿಹಾ ಸಫಲರಾಗುತ್ತಾರೆ. ಕನ್ನಡಕ್ಕೆ ಮೆತ್ತಮೊದಲನೆಯ ಸಾನೆಟ್‌ನ್ನು ನೀಡಿದವರು ಗೋವಿಂದಪೈಗಳು, ಸಣ್ಣಕತೆಯ ಆರಂಭಗಾರರು ಪಂಜೆ ಮಂಗೇಶರಾಯರು, ಮೊದಲ ಸಾಮಾಜಿಕ ಕಾದಂಬರಿಯ ಗುಲವಾಡಿ ವೆಂಕಟರಾಯರು, ಸಾಹಿತ್ಯ ದಿಗ್ಗಜರಲ್ಲೊಬ್ಬರಾದ ಶಿವರಾಮಕಾರಂತರು ಮುಂತಾದವರು ಸಾಧನೆಯ ಚರಿತ್ರೆಯನ್ನು ನಿರೂಪಿಸುತ್ತಲೇ ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಸಮುದಾಯದ ಸಂವೇದನೆಯ ಕೃತಿಗಳನ್ನು ಕೊಟ್ಟ ಬರಹಗಾರರು ಹೆಚ್ಚಿರುವುದು ದ. ಕನ್ನಡದಲ್ಲೇ ಎಂಬ ಅಂಶವನ್ನು ನಿರೂಪಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಸಣ್ಣಕತೆಯ ಹುಟ್ಟು ಮತ್ತು ಬೆಳವಣಿಗೆಯನ್ನು ಕುರಿತ ಲೇಖನವೂ ಸಾಹಿತ್ಯ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನಗಳಾಗಿವೆ. 'ಹೆಣ್ಣಿನ ಹಳಹಳಿಕೆ ಅಕ್ಷರದಂಗಳಕ್ಕೆ' ಲೇಖನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಹಿಳಾ ಸಾಹಿತ್ಯದ ಸಿಂಹಾವಲೋಕನ ಮಾಡುತ್ತಾ ಇಲ್ಲಿಯವರೆಗೂ ಅಮುಖ್ಯರಾಗಿ ಉಳಿದಬಿಟ್ಟಿದ್ದ ಬರಹಗಾರ್ತಿಯರ ಎಳೆಯನ್ನು ಸಾಹಿತ್ಯ ಚರಿತ್ರೆಯಲ್ಲಿ ಜೋಡಿಸುವ ಕೆಲಸಮಾಡುತ್ತಾರೆ. ದ.ಕನ್ನಡದ ಮಹಿಳೆ ಕತೆಗಾರ್ತಿಯರ ಚರಿತ್ರೆ ಹೇಳುವ 'ಹೆಣ್ಣು ಹೇಳಿದ ಕತೆಗಳು' ಲೇಖನವೂ ಈ ಗುಂಪಿಗೆ ಸೇರುವಂತಹುದೇ.

ಭಾನುಮುಷ್ತಾಕ್ ಲೀಲಾಬಾಯಿ ಕಾಮತ್, ಗಂಗಾ ಪಾದೇಕಲ್, ಮುಳಿಯ ತಿಮ್ಮಪ್ಪಯ್ಯ, ಕು.ಶಿ. ಹರಿದಾಸಭಟ್ಟ ಮುಂತಾದವರ ಸಾಹಿತ್ಯ ಸಾಧನೆಯನ್ನು ಪರಿಚಯ ಮಾಡಿಕೊಡುವ ಲೇಖನಗಳು ಈ ಕೃತಿಯಲ್ಲಿವೆ. ಹಾಗೆಯೇ ಕನ್ನಡದ ಮಹತ್ವದ ಲೇಖಕಿ ವೈದೇಹಿಯವರೊಡನೆ ನಡೆಸಿದ ಸಂದರ್ಶನದ ಲೇಖನ ವೈದೇಹಿಯವರ ಸಾಹಿತ್ಯದ ಹಿಂದಿನ ಸಾಂಸ್ಕೃತಿಕ ಹಿನ್ನೆಯ ಬಗ್ಗೆ ಬೆಳಕು ಚೆಲ್ಲುವಲ್ಲಿ ಯಶಸ್ವಿಯಾಗುತ್ತದೆ.



ಬಗೆ
(ವಿಮರ್ಶಾಲೇಖನಗಳ ಸಂಗ್ರಹ)
ಡಾ। ಸಬಿಹಾ ಭೂಮಿಗೌಡ,
ಪ್ರಕಾಶಕರು :
ಲೋಹಿಯಾ ಪ್ರಕಾಶನ,
ಬಳ್ಳಾರಿ,
ಬೆಲೆ : ರೂ 60/-
ಪುಟಗಳು :166

ಜನ್ನನ ಕಾವ್ಯಗಳನ್ನು ಕುರಿತ ಲೇಖನ, ಮಾಸ್ತಿಯವರ 'ಹೇಮಕೂಟದಿಂದ ಬಂದ ಮೇಲೆ' ಕತೆಯ ವಿಶ್ಲೇಷಣೆ ಲೇಖನಗಳೆರಡೂ ಪುರುಷ ಚಿಂತನೆಯ ಮಾದರಿಗಳನ್ನು ಸ್ತ್ರೀವಾದಿ ನೆಲೆಯಿಂದ ವಿಮರ್ಶಿಸುತ್ತ ಸೃಜನಶೀಲ ಪ್ರಕ್ರಿಯೆಯಾಳಗಿನ ಒಳನೋಟಗಳನ್ನು ಶೋಧಿಸುವಲ್ಲಿ ಯಶಸ್ವಿಯಾಗುತ್ತದೆ. ಜನ್ನನ ಕಾವ್ಯಗಳ ಸ್ತ್ರೀ ಪ್ರತಿಮೆಗಳ ಸೌಂದರ್ಯಾತ್ಮಕ ಸಮಸ್ಯೆಗಳನ್ನು ದೀರ್ಘವಾಗಿ ವಿಶ್ಲೇಷಿಸುತ್ತಾ ಭಾರತೀಯ ಸ್ತ್ರೀವಾದದಲ್ಲಿ ಸ್ತ್ರೀವಾದಿ ಸೌಂದರ್ಯ ಮೀಮಾಂಸೆಯು ಶಕ್ತವಾಗಿ ರೂಪುಗೊಳ್ಳಬೇಕಾದ ಅಗತ್ಯತೆಯ ಬಗ್ಗೆ ಗಮನ ಸೆಳೆಯುತ್ತಾರೆ.

ಸ್ತ್ರೀವಾದಿ ವಿಮರ್ಶೆಯೇ ಮುಖ್ಯ ಧ್ವನಿಯಾಗಿರುವ ಈ ಸಂಕಲನ ಸ್ತ್ರೀವಾದಿ ಅಧ್ಯಯನಕ್ಕೆ ಒಂದು ಉಪಯುಕ್ತ ಸೇರ್ಪಡೆಯಾಗಿದೆ.

- ಆಶಾ

# ಗ್ರಾಮೀಣಾಭಿವೃದ್ಧಿಯಲ್ಲಿ ಕರ್ನಾಟಕದ ಮುನ್ನಡೆ

## ರಾಷ್ಟ್ರದ ಘನತೆ, ಗೌರವ, ಕೀರ್ತಿ ಕಾಪಾಡಲು ದೃಢ ಸಂಕಲ್ಪ ಮಾಡೋಣ

### ಗ್ರಾಮೀಣಾಭಿವೃದ್ಧಿ:

★ ವಿಶೇಷವಾಗಿ ಉತ್ತರ ಭಾಗದ ಜಿಲ್ಲೆಗಳಲ್ಲಿ ಹೆಚ್ಚು ಪ್ರಯೋಗಾಲಯಗಳನ್ನು ಸ್ಥಾಪಿಸಿ ರೋಗ ಪತ್ತೆ ಹಚ್ಚುವ ಸೌಕರ್ಯ ವೃದ್ಧಿಗೆ ಯೋಜನೆ.

★ ಪ್ರಮುಖ ಮಾರುಕಟ್ಟೆಗಳಲ್ಲಿ ಆನ್‌ಲೈನ್ ಬೆಲೆ ಮಾಹಿತಿ ವ್ಯವಸ್ಥೆಯ ಅನುಷ್ಠಾನ.

★ ಗ್ರಾಮೀಣ ಪ್ರದೇಶಗಳಲ್ಲಿ ಜಾನುವಾರುಗಳಿಗೆ ಕೃತಕ ಗರ್ಭಧಾರಣೆಯನ್ನು ಹಂತ ಹಂತವಾಗಿ ಖಾಸಗೀಕರಣಗೊಳಿಸಲು ಕ್ರಮ.

★ ಮಾರುಕಟ್ಟೆ ಸಮಿತಿಗಳಿಗೆ ಇಂಟರ್‌ನೆಟ್ ಸೌಲಭ್ಯಗಳ ಪೂರೈಕೆ.

★ ಬಡತನ ರೇಖೆಗಿಂತ ಕಡಿಮೆ ಇರುವ ಕುಟುಂಬಗಳಿಗೆ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಸೌಲಭ್ಯದ ಖಾತರಿಗಾಗಿ ಮನೆ ಮನೆ ಸಮೀಕ್ಷಾ ಕಾರ್ಯ.

★ ಪಡಿತರ ಚೀಟಿಗಳ ಗಣಕೀಕರಣ

★ ರಾಜೀವಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ಗ್ರಾಮೀಣ ಮತ್ತು ನಗರ ಪ್ರದೇಶದ' ವಸತಿ ಹೀನ ಬಡವರಿಗೆ ಹನ್ನೊಂದು ಲಕ್ಷ ಮನೆಗಳ ನಿರ್ಮಾಣಕ್ಕೆ ಬೃಹತ್ ಯೋಜನೆ.

★ ಕೊಳಚೆ ಪ್ರದೇಶದ ಅಭಿವೃದ್ಧಿಗಾಗಿ ನಿರ್ಮಲ ಜ್ಯೋತಿ ಕಾರ್ಯಕ್ರಮದ ಅನುಷ್ಠಾನ.

### ಕೃಷಿ:

★ ಪ್ರಕೃತಿ ವಿಕೋಪದ ಪರಿಹಾರಕ್ಕೆ ರೂ.103 ಕೋಟಿಗಳ ಬಿಡುಗಡೆ.

★ ಬರಗಾಲ ಪೀಡಿತ ಪ್ರದೇಶಗಳಿಗೆ ಆಹಾರ ಧಾನ್ಯಗಳ ಹಂಚಿಕೆ.

★ ಕೃಷಿ ಆಯೋಗದ ಶಿಫಾರಸ್ಸುಗಳ ಜಾರಿ 745 ಹೋಬಳಿಗಳ ಪೈಕಿ 741 ಹೋಬಳಿಗಳಲ್ಲಿ ರೈತ ಸಂಪರ್ಕ ಕೇಂದ್ರಗಳ ಸ್ಥಾಪನೆ.

★ ಕೃಷಿ ಪದ್ಧತಿ ಪ್ಯಾಕೇಜ್ ವಿವರಗಳು ಪರಿಕರ ದಾಸ್ತಾನು ಸ್ಥಿತಿ ಮತ್ತು ತಾಂತ್ರಿಕ ವಿವರಗಳನ್ನು ಒದಗಿಸುವ ವೆಬ್‌ಸೈಟ್ ಸ್ಥಾಪನೆ.

★ ತೋಟಗಾರಿಕೆ ಅಭಿವೃದ್ಧಿಗೆ ವಿಶೇಷ ಒತ್ತು.

★ ಮಾಹಿತಿ ಬ್ಯಾಂಕ್ ಮೂಲಕ ಮಾಹಿತಿ ಒದಗಿಸಲು ಏಕಗವಾಕ್ಷಿ ವಿಧಾನ ಅನುಸರಣೆ.

### ಸಾರಿಗೆ :

★ 7.000 ಕಿ.ಮೀ ಉದ್ದದ ರಾಜ್ಯ ಹೆದ್ದಾರಿಗಳ ನಿರ್ವಹಣಾ ಕಾರ್ಯಕ್ರಮಕ್ಕೆ.

★ ನಬಾರ್ಡ್ ನೆರವಿನಿಂದ ರೂ.320 ಕೋಟಿ ವೆಚ್ಚದಲ್ಲಿ 4706 ಕಿ.ಮೀ ಗ್ರಾಮೀಣ ರಸ್ತೆಗಳ ಸುಧಾರಣೆ. 100 ಸೇತುವೆಗಳ ನಿರ್ಮಾಣ.

**- ಕರ್ನಾಟಕ ವಾರ್ತೆ**

# ಮಂಗಳವಾದ್ಯ ಮೊಳಗಿದ ಮೇಲೆ

ಭಾರತದಲ್ಲಿ ವರದಕ್ಷಿಣೆ ಸಾವುಗಳ ಸಂಖ್ಯೆ ಅತ್ಯಧಿಕ, ಹಾಗೂ ಇಡೀ ಉಪಖಂಡದಲ್ಲೇ ವರದಕ್ಷಿಣೆಗೆ ಬೇಡಿಕೆ ಮತ್ತು ಅದಕ್ಕೆ ಸಂಬಂಧಿಸಿದಂತೆ ಹಿಂಸೆ ಕ್ರೌರ್ಯಗಳು ಹೆಚ್ಚುತ್ತಲೇ ಇವೆ. ಈ ದೇಶಗಳಲ್ಲಿ ಹೆಚ್ಚಿನ ಮದುವೆಗಳು ಹಿರಿಯರು ನಿಶ್ಚಯಿಸಿದ್ದೇ ಆಗಿರುತ್ತವೆ. ಬೇಡಿಕೆಯನ್ನು ಈಡೇರಿಸಲು ಆಗದಿದ್ದರೆ ಆ ಹುಡುಗಿ ಮದುವೆಯಾಗದೆಯೇ ಉಳಿಯುವ ಸಾಧ್ಯತೆ ಇರುತ್ತದೆ. ಈ ಪ್ರದೇಶದ ದೇಶಗಳು ವರದಕ್ಷಿಣೆಗೆ ಸಂಬಂಧಿಸಿದ ಹಿಂಸೆಯನ್ನು ಹತ್ತಿಕ್ಕಲು ಶಾಸನಗಳನ್ನೇನೋ ರೂಪಿಸಿವೆ. ಆದರೂ ವರದಕ್ಷಿಣೆ ಪದ್ಧತಿ ಹಾಗು ಅದರ ಪರಿಣಾಮಗಳು ಉಳಿದಿದೆ ಬೆಳೆದಿದೆ. ಪಾಕಿಸ್ತಾನದಲ್ಲಿ ಜಮೀನ್ದಾರರ ಮನೆಯ ಹೆಣ್ಣುಮಕ್ಕಳನ್ನು 'ಕುರಾನ್'ಗೆ ಕೊಟ್ಟು ಮದುವೆ ಮಾಡಿಬಿಡುತ್ತಾರೆ. ಮನೆಯ ಆಸ್ತಿ ಮನೆಯಲ್ಲೇ ಉಳಿಯಲಿ ಎಂದು ಬಾಂಗ್ಲಾದೇಶದಲ್ಲಿ ಮದುವೆ ವಿಚಾರಕ್ಕೆ ಹೆಚ್ಚಿನ ಶಿಕ್ಷಣ ಪ್ರತಿಕೂಲವಾಗುತ್ತದೆ. ಶ್ರೀಲಂಕಾದಲ್ಲಿ ಆಸ್ತಿಗೆ ಸಂಬಂಧಿಸಿದ ಕಾನೂನು ಮಹಿಳೆಯರಿಗೆ ಅನುಕೂಲವಾಗುವಂತಿದ್ದರೆ ಬಹಳ ಚಾಣಾಕ್ಷತನದಿಂದ ಅವನ್ನು ಬದಲಾಯಿಸಲಾಗುತ್ತದೆ. ನೇಪಾಳದಲ್ಲಿ ಹಿರಿಯರ ಆಸ್ತಿ ಒಂದು ರೀತಿಯಲ್ಲಿ ಸಮೃದ್ಧಿ ಹಾಗೂ ಕೊಳ್ಳುಬಾಕ ಪ್ರವೃತ್ತಿ ಜಾಸ್ತಿಯಾದಂತೆ ವರದಕ್ಷಿಣೆ ಹಿಂಸೆಯೂ ಜಾಸ್ತಿಯಾಗುತ್ತಿದೆ.

ಗೃಹೋಪಯೋಗಿ ವಸ್ತುಗಳು ಹೆಚ್ಚಾದಂತೆ, ಸಮಸ್ಯೆಯೂ ಹೆಚ್ಚಾಗಿದೆ. ಹಣದ ಜೊತೆಗೆ ಕಾರು, ಸ್ಕೂಟರ್, ಟೆಲಿವಿಷನ್ ಇತ್ಯಾದಿ ವಸ್ತುಗಳಿಗೆ ಎಡೆಬಿಡದ ಬೇಡಿಕೆ ಇದೆ. ದುರಾಸೆ ಎಲ್ಲೆಲ್ಲೂ ವ್ಯಾಪಿಸಿದೆ. ನಿಜ ಹೇಳಬೇಕೆಂದರೆ ಈ ದುರಾಸೆ ನಗರದ ವಿದ್ಯಾವಂತ ಶ್ರೀಮಂತರಲ್ಲಿಯೇ ಹೆಚ್ಚಾಗಿದ್ದು ಹಳ್ಳಿಯ ಅಶಿಕ್ಷಿತ ಬಡವರಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ.

ಭಾರತದಲ್ಲಿ ಸಮೃದ್ಧಿಗೂ-ವರದಕ್ಷಿಣೆ ಸಾವಿನ ಪ್ರಸಂಗಗಳಿಗೂ ಏನೋ ಸಂಬಂಧವಿದ್ದಂತೆ ಕಾಣುತ್ತದೆ. ಕರ್ನಾಟಕದ ಕೈಗಾರಿಕಾನಗರ ಹುಬ್ಬಳ್ಳಿಯಲ್ಲೇ ಒಂದು ದಿನಕ್ಕೆ ಒಂದಾದರೂ ವರದಕ್ಷಿಣೆ ಸಾವು ದಾಖಲಾಗುತ್ತದೆ. ಕೆಲವು ವರ್ಷಗಳ ಹಿಂದೆ, ಬೆಂಗಳೂರಿನಲ್ಲಿ ಈ ಸಂಖ್ಯೆ ದಿನಕ್ಕೆ 'ಎರಡು' ಇತ್ತು. ಈಗ ಅದು 'ಮೂರು'ಆಗಿದೆ. ಶ್ರೀಲಂಕಾದಲ್ಲಿ ಮಹಿಳೆಯರಿಗೆ ಆಸ್ತಿ ಹಕ್ಕು ಇದೆ, ಪಾರಂಪರಿಕ ಆಸ್ತಿ ಹಕ್ಕು ಇದೆ. ಇಲ್ಲಿ ವರದಕ್ಷಿಣೆಯನ್ನು ವಧುವಿನ ಸಂಪತ್ತು ಅಥವಾ ಮಹಿಳೆಯರ ಆಸ್ತಿಯೆಂಬಂತೆ ನೋಡುತ್ತಾರೆ. ಮದುವೆಗೆ ಮುಂಚೆ ವರದಕ್ಷಿಣೆ ತೆಗೆದುಕೊಳ್ಳುವುದು ಈ ದ್ವೀಪರಾಷ್ಟ್ರದ ಮೂರು ಬಲಿಷ್ಠ ಜನಾಂಗಗಳಲ್ಲಿ ಸಾಮಾನ್ಯವಾಗಿದೆ. ಸಂಪ್ರದಾಯರೀತ್ಯಾ, ಭೂಮಿಯನ್ನು ವರದಕ್ಷಿಣೆಯಾಗಿ ಕೊಟ್ಟಾಗ, ಅದು ಮಹಿಳೆಯ ಹೆಸರಿನಲ್ಲೇ ಇರುತ್ತಿತ್ತು. ಆದರೆ, ಈಚೆಗಿನ ಸಾಮಾಜಿಕ ಪದ್ಧತಿಗಳ ಪ್ರಕಾರ ತಂದೆತಾಯಿಗಳಿಗೆ ಈ ಕಾಗದ ಪತ್ರಗಳನ್ನು ಅಳಿಯನ ಹೆಸರಿಗೆ ಮಾಡಬೇಕೆಂಬ ಒತ್ತಾಯದ ಹೇರಿಕೆ ಇದೆ.

ಇಲ್ಲಿನ ಇಸ್ಲಾಮಿ ಕಾನೂನು ಪ್ರಕಾರ ವಧು ಸಂಪತ್ತಿಗೆ ಪರವಾನಗಿ ಇದೆ, ಆದರೆ ಸಿಂಹಳೀಯ ಮತ್ತು ತಮಿಳು ಜನಾಂಗಗಳ ವೈಯುಕ್ತಿಕ ಕಾನೂನಿನ ಅನ್ವಯ ಇದು ಸಲ್ಲದು. ಇಸ್ಲಾಮಿ ಕಾನೂನು ಪ್ರಕಾರ ವರ ವಧುವಿಗೆ ಮೆಹರ್ ಅಥವಾ ಧನದ ಉಡುಗೊರೆ ಕೊಡುತ್ತಾನೆ, ಆದರೆ ಈ ಮೆಹರ್‌ನ ಮೊತ್ತ ಕಡಿಮೆಯಾಗುತ್ತಲಿದೆ, ವರದಕ್ಷಿಣೆಯ ದರ ಏರುತ್ತಲಿದೆ.

ಆದರೆ ಇತರ ದೇಶಗಳಲ್ಲಿರುವಂತೆ, ವರದಕ್ಷಿಣೆ ಹಿಂಸೆಗೆ ಎಡೆ ಮಾಡಿಕೊಡುವ ಪ್ರಸಂಗಗಳು ಶ್ರೀಲಂಕಾದಲ್ಲಿ ಕಡಿಮೆಯೇ, ಆದರೆ ಸ್ಪಷ್ಟ ಸಾಕ್ಷ್ಯಾಧಾರಗಳಿಲ್ಲವಾದರೆ, ವರದಕ್ಷಿಣೆಯ ಸಮಸ್ಯೆಯೇ ಇಲ್ಲಿ ಇಲ್ಲವೆಂದು ಹೇಳಲಾಗದು ಎನ್ನುತ್ತಾರೆ ಚಳುವಳಿಕಾರರು.

ಪಾಕಿಸ್ತಾನದಲ್ಲಿರುವ ಇಸ್ಲಾಮಿ ಕಾನೂನಿನ ಅನ್ವಯ ಒಬ್ಬ ಮಹಿಳೆಗೆ ತನ್ನ ಹೆತ್ತವರ ಆಸ್ತಿಯಲ್ಲಿ ಎಂಟನೆಯ ಒಂದು ಭಾಗವನ್ನು ವರದಕ್ಷಿಣೆಯನ್ನಾಗಿ ಹೊಂದುವ ಹಕ್ಕಿದೆ. ಆದ್ದರಿಂದಲೇ ದೊಡ್ಡ ಜಮೀನ್ದಾರ ಕುಟುಂಬಗಳಲ್ಲಿ ಹೆಣ್ಣುಮಕ್ಕಳನ್ನು ಕುರಾನಿಗೆ ಮದುವೆ ಮಾಡಿಕೊಟ್ಟು ಸಂತೃಪ್ತರಾಗುತ್ತಾರೆ. ಆಸ್ತಿ ಹಂಚುವ ಪ್ರಮೇಯವೇ ಬರುವುದಿಲ್ಲ. ಪಾಕಿಸ್ತಾನದ ಅಭಿವೃದ್ಧಿ ಹೊಂದಿದ ಪ್ರದೇಶಗಳಲ್ಲಿ ಮಧ್ಯಮ ವರ್ಗದವರಲ್ಲಿ ವರದಕ್ಷಿಣೆಯ ಬೇಡಿಕೆ ಎಷ್ಟು ಹೆಚ್ಚಾಗಿದೆಯೆಂದರೆ ಅನೇಕರು ಮದುವೆಯಾಗದೆಯೇ ಉಳಿಯುವುದನ್ನು ಬಯಸುತ್ತಾರೆ. ಇಸ್ಲಾಮಿನ ಧರ್ಮದ ಪ್ರಕಾರ ಮದುವೆಗಳು ಸರಳವಾಗಿ ನಡೆಯಬೇಕು, ಕನಿಷ್ಠ ಪ್ರಮಾಣದಲ್ಲಿ ವರದಕ್ಷಿಣೆ ಕೊಡಬೇಕು. ಆದರೆ ಆಡಂಬರದ ಮದುವೆ, ಅಗಾಧ ವರದಕ್ಷಿಣೆ ಈಗ ಅತಿ ಸಾಮಾನ್ಯ.

ಸ್ಟವ್ ಸಿಡಿದು ಸತ್ತ ಪಾಕಿಸ್ತಾನಿ ಮಹಿಳೆಯರ ಅಂಕಿ ಅಂಶಗಳನ್ನು ಇಡುವುದು ಬಹಳ ಕಷ್ಟ ಎಂದು ಪಾಕಿಸ್ತಾನ ಮಹಿಳಾ ವಕೀಲರ ಸಂಘದ ಕಾರ್ಯಕರ್ತರು ಹೇಳುತ್ತಾರೆ. ಅಲ್ಲದೆ ಇವು ಗ್ರಾಮಗಳಲ್ಲೇ ಜಾಸ್ತಿ ಸಂಭವಿಸುವುದರಿಂದ, ಈ ಲೆಕ್ಕ ಇಡುವುದು ಕಷ್ಟ ಬಾಂಗ್ಲಾದೇಶದಲ್ಲಿಯು ಇದೇ ಕತೆಯೇ. ಇಲ್ಲಿನ ಸಾತ್‌ಕಿಲಾ ಜಿಲ್ಲೆಯೊಂದರಲ್ಲೇ ಬಡಕುಟುಂಬಗಳಿಗೆ ಸೇರಿದ ಸುಮಾರು 50,000 ಅವಿವಾಹಿತ ತರುಣಿಯರಿದ್ದಾರೆ. ವರದಕ್ಷಿಣೆಯ ಬೇಡಿಕೆಗಳನ್ನು ಪೂರೈಸುವುದು ಅಸಾಧ್ಯವಾದ್ದರಿಂದ, ಇವರಿಗೆ ಮದುವೆಯಾಗುವ ಭರವಸೆಯೇ ಇಲ್ಲ.

ಶಿಕ್ಷಿತ ಹುಡುಗಿಗೂ ಕೂಡ ತನ್ನಷ್ಟೇ ಕಲಿತ ವರ ಸಿಗುವುದು ಕಷ್ಟವೇ. ತಮ್ಮ ಹಿರಿಯ ಹೆಣ್ಣುಮಕ್ಕಳಿಗೆ ಓದಲು ಪ್ರೋತ್ಸಾಹಿಸಿದ ತಂದೆ ತಾಯಿಗಳು ಈ ಕಾರಣದಿಂದ ಈಗ ಪರಿತ ಪಿಸುತ್ತಿದ್ದಾರೆ, ಹಾಗೂ ಇತರರಿಗೆ ಅಷ್ಟಾಗಿ ಓದಿಸಲು ಅವರಿಗೆ ಮನಸ್ಸಿಲ್ಲ. ಅಧಿಕೃತ ಸರ್ಕಾರಿ ವರದಿ ಪ್ರಕಾರ, ಬಾಂಗ್ಲಾದೇಶದಲ್ಲಿ ವರದಕ್ಷಿಣೆ ಹಿಂಸೆಯ ಸಂಖ್ಯೆ ಹೆಚ್ಚುತ್ತಿದೆ. 1990ರಿಂದ 97ರವರೆಗೆ 2026 ಮಹಿಳೆಯರು ಇದಕ್ಕೆ ಬಲಿಯಾಗಿದ್ದರು. ಬಾಂಗ್ಲಾದೇಶ ರಾಷ್ಟ್ರೀಯ ಮಹಿಳಾ ವಕೀಲರ ಸಂಘವು 2000ರಲ್ಲಿ 203 ಮಹಿಳೆಯರು ವರದಕ್ಷಿಣೆ ಸಾವಿಗೀಡಾದರು ಹಾಗೂ 34 ಮಂದಿ ಅತ್ತೆ ಮಾವಂದಿರಿಂದ ಹಿಂಸೆಗೊಳಗಾಗಿದ್ದರು ಎನ್ನುತ್ತದೆ. ಅದೇ ವರ್ಷ, ಮಹಿಳೆ ಮತ್ತು

RNI No. 45577/88

ಮಕ್ಕಳಿಗೆ ಹೊಡೆದು ಬಡಿದರೆ, ಜೀವಾವಧಿ ಶಿಕ್ಷೆ ಎಂಬ ಕಾನೂನನ್ನು ಜಾರಿಗೊಳಿಸಲಾಗಿತ್ತು.

ಭಾರತದಲ್ಲಿ ಈ ಪರಿಸ್ಥಿತಿ ಗಂಭೀರವಾಗಿಯೇ ಇದೆ. 1987ರಲ್ಲಿ 1912 ಪ್ರಕರಣಗಳು, 1989ರಲ್ಲಿ 4906 ಹಾಗೂ 2000ದಲ್ಲಿ 6,222 ಅನೇಕ ವರದಕ್ಷಿಣೆ ಪ್ರಕರಣಗಳು ವರದಿಯಾಗುವುದಿಲ್ಲ; ಅಥವಾ ಆಕಸ್ಮಿಕವೆಂದೋ, ಸ್ಟವ್ ಸಿಡಿತ್ ಎಂದೋ ವರದಿಯಾಗುತ್ತದೆ. ವರದಕ್ಷಿಣೆ ಸಾವುಗಳ ಬಗೆ ಮಹಿಳಾ ಸಂಘಟನೆಗಳು ಇಷ್ಟೆಲ್ಲ ಹುಯಿಲೆಬ್ಬಿಸಿದರೂ, ಶಿಕ್ಷೆಗೆ ಒಳಗಾಗುವವರು ಶೇ.3ರಷ್ಟು ಮಾತ್ರ.

ವರದಕ್ಷಿಣೆ ಹಿಂಸೆಗೆ ಒಳಗಾಗುವವರು ಅಶಿಕ್ಷಿತರು ಹಳ್ಳಿಯವರು ಮಾತ್ರವಲ್ಲ. ವಿದ್ಯಾವಂತ ಹಾಗೂ ಆಧುನಿಕ ಸಮಾಜಕ್ಕೆ ಸೇರಿದ ಮಹಿಳೆಯರೂ ಇದಕ್ಕೆ ಬಲಿಯಾಗುತ್ತಾರೆ. ಎಂ.ಬಿ.ಎ. ಓದಿದ್ದ ಅಪರ್ಣಾ ಕಿರುಕುಳ ಸಹಿಸದೆ ಆತ್ಮಹತ್ಯೆ ಮಾಡಿಕೊಂಡಳು. ಅದೇ ರೀತಿ-ಸುಜಾತ ವೈದ್ಯಕೀಯದಲ್ಲಿ ಚಿನ್ನದ ಪದಕ ಪಡೆದವಳು. ಭಾರತದಲ್ಲಿ ಪೋಲೀಸ್ ಮತ್ತು ಐಎಎಸ್ ಅಧಿಕಾರಿಗಳು ಹೆಚ್ಚಿನ ವರದಕ್ಷಿಣೆ ಅಪೇಕ್ಷಿಸುತ್ತಾರೆ. ಸಮಾಜದಲ್ಲಿ ಅವರ ಘನತೆಗೆ ಅನುಗುಣವಾಗಿ ಈ ಬೇಡಿಕೆ, ವಕೀಲರು ಹಾಗೂ ನ್ಯಾಯಾಧೀಶರುಗಳಿಗೆ ವರದಕ್ಷಿಣೆ ಪದ್ಧತಿ ಸಲ್ಲದು ಎಂದು ಗೊತ್ತಿದ್ದರೂ ಕೂಡ ಇದನ್ನು ಪಾಲಿಸುತ್ತಾರೆ.

ವಾಸ್ತವಾಂಶವೇನೆಂದರೆ ಇದನ್ನೂ ಸಾರ್ವಜನಿಕವಾಗಿ ಖಂಡಿಸಿದರು, ಹೆಚ್ಚಿನ ಜನ ಒಳಗೊಳಗೇ ಇದನ್ನು ಅನುಮೋದಿಸುತ್ತಾರೆ. ಈ ವಲಯದ ಎಲ್ಲ ದೇಶಗಳೂ ವರದಕ್ಷಿಣೆ ಪದ್ಧತಿಯನ್ನು ವಿರೋಧಿಸಿ, ಮಹಿಳೆಯರಿಗೆ ಹಿಂಸೆ, ಆಡಂಬರದ ಮದುವೆ ಇವುಗಳೆಲ್ಲದರ ವಿರುದ್ಧ ಹೊಸ ಹೊಸ ಕಾನೂನು ಕಾಯಿದೆಗಳನ್ನು ಮಾಡುತ್ತ ಬಂದರೂ ವರದಕ್ಷಿಣೆ ಕೇಸುಗಳು ನ್ಯಾಯಾಲಯಗಳಲ್ಲಿ ವರ್ಷಗಟ್ಟಳೆ ನಡೆಯುತ್ತವೆ, ಹುಡುಗಿಯ ತಂದೆತಾಯಿಗಂತೂ ವಿರೋಧವನ್ನು ಮುಂದುವರೆಸುವ ಸಂಕಲ್ಪ ಶಕ್ತಿಯೇ ಕುಸಿಯುತ್ತದೆ ಅಥವಾ ಇದಕ್ಕೆ ಬೇಕಾಗುವ ಸಂಪನ್ಮೂಲವೇ ಸಿಗದಾಗುತ್ತದೆ.

ಸಾಕಷ್ಟು ಸಾಕ್ಷ್ಯಾಧಾರಗಳಿಲ್ಲದೆ ಅನೇಕ ಪ್ರಕರಣಗಳನ್ನು ವಜಾ ಮಾಡಲಾಗುತ್ತದೆ. ಕಷ್ಟ ಅನುಭವಿಸಿದವರು ಮೇಲಿನ ಕೋರ್ಟಿಗೂ ಹೋಗುತ್ತಾರೆ. ಆದರೆ ಅವರ ಜೀವಿತಾವಧಿಯಲ್ಲಿ ತೀರ್ಪು ಸಿಗುವುದು ಅಪರೂಪವೇ. ಸತ್ಯರಾಣಿ ಚದ್ದಾರ್‌ವರ ಮಗಳು 1974ರಲ್ಲಿ ವರದಕ್ಷಿಣೆ ಕಿರುಕುಳದಲ್ಲಿ ಸಾವಿಗೀಡಾಗಿದ್ದಳು. 21 ವರ್ಷ ಹೋರಾಡಿದ ನಂತರ ತಪ್ಪಿತಸ್ಥರಿಗೆ ಶಿಕ್ಷೆಯೇನೋ ಆಯಿತು. ಆದರೆ ಎಲ್ಲರಿಗೂ ಅಷ್ಟು ಕೆಚ್ಚು, ತಾಳ್ಮೆ, ಸಮಯ-ಸಂಪನ್ಮೂಲ ಬೇಕಲ್ಲ!

ಈ ದಿಸೆಯಲ್ಲಿ ಕಾನೂನನ್ನು ಜಾರಿಗೊಳಿಸಲಾಗುತ್ತಿಲ್ಲ ಎನ್ನುವುದು ಸ್ಪಷ್ಟವಿದಿತ. ಈ ಸಂಬಂಧದ ವೈದ್ಯಕೀಯ ವರದಿಗಳು ಲಂಚಗುಳಿತನದ ಕೈ ಚಳಕಕ್ಕೊಳಗಾಗುತ್ತವೆ; ಸಾಕ್ಷ್ಯಾಧಾರಗಳು ಮಂಗಮಯವಾಗುತ್ತದೆ. ಪರಿಣಾಮ: ನ್ಯಾಯಾಂಗ ವ್ಯವಸ್ಥೆಯ ಹೆದ್ದಾರಿಯಲ್ಲೇ ನ್ಯಾಯ ಎನ್ನುವುದು ಕಳೆದುಹೋಗುತ್ತದೆ.

**ಮಂಗಳವಾದ್ಯ ಮೊಳಗಿದ ಮೇಲೆ ಕೆಲವರು - ಕೆಲವೇ ಕೆಲವರು ಮಾತ್ರ ಸುಖವಾಗಿರುತ್ತಾರೆ.**

**- ಉಷಾ ರೈ**

"Achala" 108, Skyline Surabhi,
14-P, Vidyapeeta Road, BSK III Stage,
Bangalore - 560 085

CPMG/KA/BG-8/2002
Book-Post/News Letter

To :
Smt/Sri